ಉಪನ್ಯಾಸ
ಗ್ರಂಥಮಾಲೆ

೧೧೧

# ಪ್ರಾಚೀನ ಕರ್ನಾಟಕದ ಶಿಕ್ಷಣ ಕ್ರಮ

ಡಾ. ಜಿ. ಎಸ್. ದೀಕ್ಷಿತ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಿಶಂಬರ, ೧೯೭೦

ಉಪನ್ಯಾಸ ಗ್ರಂಥಮಾಲೆ

೧೧೧

# ಪ್ರಾಚೀನ ಕರ್ನಾಟಕದ ಶಿಕ್ಷಣ ಕ್ರಮ

ಡಾ. ಜಿ. ಎಸ್. ದೀಕ್ಷಿತ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಿಶಂಬರ, ೧೯೭೦

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವ-ವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನವಿಟ್ಟು ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ೧೧೦ ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು–ನಾಲ್ಕು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧–೧೨–೧೯೭೦

ಎ. ಎಸ್. ಅಡಕೆ
ಕುಲಪತಿ

# ಅರಿಕೆ

ಅನೇಕ ವರ್ಷಗಳ ಹಿಂದೆ ಅಮ್ಮಿನಭಾವಿಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಶಾಖೆಯವರು ಏರ್ಪಡಿಸಿದ ಶಿಬಿರದಲ್ಲಿ ಮಾಡಿದ ಭಾಷಣವನ್ನು ಆಧರಿಸಿ ಈ ಪುಸ್ತಕವನ್ನು ಬರೆಯಲಾಗಿದೆ. ನನಗೆ ಭಾಷಣವನ್ನು ಮಾಡಲಿಕ್ಕೆ ಅವಕಾಶ ಕೊಟ್ಟಿದ್ದಕ್ಕೂ ಮತ್ತು ಈ ಪುಸ್ತಕವನ್ನು ಪ್ರಕಾಶಿಸಲು ನೆರವು ನೀಡಿದ್ದಕ್ಕೂ ಈ ಶಾಖೆಯ ಮುಖ್ಯಾಧಿಕಾರಿಗಳಾದ ಶ್ರೀ ಚೆನ್ನವೀರ ಕಣವಿಯವರಿಗೆ ನಾನು ಉಪಕೃತನಾಗಿದ್ದೇನೆ. ಪುಸ್ತಕವನ್ನು ಅಚ್ಚಿಗೆ ಸಿದ್ಧಪಡಿಸುವಾಗ ಸಹಾಯ ಮಾಡಿದ ಶ್ರೀಮತಿ ಜ್ಯೋತ್ಸ್ನಾ ಕಾಮತ್ ಮತ್ತು ಶ್ರೀ ಎಸ್. ಜಿ. ಘಟಪಣದಿಯವರಿಗೂ ನಾನು ಕೃತಜ್ಞ.

ಇತಿಹಾಸ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨೯–೧೨–೧೯೭೦

ಜಿ. ಎಸ್. ದೀಕ್ಷಿತ

## ಪರಿವಿಡಿ

# ಪ್ರಾಚೀನ ಕರ್ನಾಟಕದ ಶಿಕ್ಷಣ ಕ್ರಮ

## ಪ್ರಸ್ತಾವನೆ

ಕರ್ನಾಟಕದಲ್ಲಿ ದೊರೆತಿರುವ ಶಾಸನಗಳಿಂದ ಪ್ರಾಚೀನ ಕಾಲದಿಂದ ಸುಮಾರು ಕ್ರಿ. ಶ. ೧೨೦೦ ರ ವರೆಗೆ ವಿದ್ಯಾಭ್ಯಾಸಕ್ಕೆ ದೊರೆಯುತ್ತಿದ್ದ ಪ್ರೋತ್ಸಾಹ, ವಿದ್ಯಾಸಂಸ್ಥೆಗಳು ಮತ್ತು ಅವುಗಳಲ್ಲಿಯ ಅಭ್ಯಾಸಕ್ರಮ ಮತ್ತು ಇಂಥ ಸಂಸ್ಥೆಗಳ ಸಂಘಟನೆ, ಇವುಗಳ ಬಗ್ಗೆ ಹಲವಾರು ಸಂಗತಿಗಳನ್ನು ತಿಳಿದುಕೊಳ್ಳಬಹುದಾಗಿದೆ. ಈ ಚಿಕ್ಕ ಹೊತ್ತಿಗೆಯಲ್ಲಿ ಇವೇ ಕೆಲವು ಅಂಶಗಳನ್ನು ಬರೆಯುವ ಪ್ರಯತ್ನ ಮಾಡಲಾಗಿದೆ.

ಬ್ರಾಹ್ಮಿಲಿಪಿ ಮತ್ತು ಪ್ರಾಕೃತ ಭಾಷೆಯಲ್ಲಿರುವ ಅಶೋಕ ಮೌರ್ಯನ ಶಾಸನಗಳು ರಾಯಚೂರ ಜಿಲ್ಲೆಯ ಕೊಪ್ಪಳ, ಮತ್ತು ಮಸ್ಕಿಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರಗಳಲ್ಲಿ ಮತ್ತು ಜಟಿಂಗ ರಾಮೇಶ್ವರಗಳಲ್ಲಿ ದೊರೆತಿವೆ. ಇವು ಸಾರ್ವಜನಿಕರನ್ನುದ್ದೇಶಿಸಿ ಬರೆದಂಥ ಶಾಸನಗಳು. ಹೀಗಾಗಿ ಅಂದಿನ ಜನಸಾಮಾನ್ಯರಿಗೆ ಈ ಭಾಷೆ ತಿಳಿಯುತ್ತಿದ್ದಿತೆಂದು ನಾವು ಊಹಿಸಬಹುದು.

ಮೌರ್ಯರ ನಂತರ ಕರ್ನಾಟಕದಲ್ಲಿ ಆಳಿದ ಶಾತವಾಹನರು, ಚುಟು, ಕದಂಬರ ಮತ್ತು ಪಲ್ಲವರ ಕೆಲವು ಶಾಸನ

ಗಳು ದೊರೆತಿರುವ ಕರ್ನಾಟಕದ ಭಾಗಗಳಲ್ಲಿ ಸಂಸ್ಕೃತದ ಜೊತೆಗೆ ಪ್ರಾಕೃತವು ಆಡಳಿತದಲ್ಲಿ ಮತ್ತು ವಿದ್ಯಾಸಂಸ್ಥೆಗಳಲ್ಲಿ ಪ್ರಯೋಗದಲ್ಲಿ ಇತ್ತೆಂದು ತೋರುತ್ತದೆ. ಸ್ಥೂಲವಾಗಿ ಹೇಳುವದಾದರೆ ಕ್ರಿ. ಶ. ಪೂ. ೨೫೦ ರಿಂದ ಕ್ರಿ. ಶ. ೩೦೦ ರ ವರೆಗೆ ಅಂದರೆ ಸುಮಾರು ೫೦೦–೬೦೦ ವರ್ಷಗಳ ವರೆಗೆ ಪ್ರಾಕೃತಭಾಷೆ ಕರ್ನಾಟಕದಲ್ಲಿ ಅಧಿಕೃತವಾಗಿ ಉಪಯೋಗಿಸಲ್ಪಡುತ್ತಿತ್ತು. ಕ್ರಮೇಣ ಸಂಸ್ಕೃತ ಮತ್ತು ಕನ್ನಡ ಭಾಷೆಗಳು ಅದರ ಸ್ಥಾನವನ್ನು ಆಕ್ರಮಿಸಿದವು.

## ರಾಜರ ವಿದ್ಯಾಭ್ಯಾಸ ಕ್ರಮ

ವಿದ್ಯಾಭ್ಯಾಸದ ಮುಖ್ಯ ಸಾಧನವಾದ ಭಾಷೆಯ ಬಗ್ಗೆ ತಿಳಿದುಕೊಂಡಮೇಲೆ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ದೊರೆಯುತ್ತಿದ್ದ ಬಗ್ಗೆ ಮತ್ತು ಇಂಥ ಪ್ರೋತ್ಸಾಹ ದೊರಕಲು ಕಾರಣವನ್ನು ವಿಚಾರಿಸುವದು ಸೂಕ್ತ. ' ನ ಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಂ ' ಎಂಬಂತೆ ಬಂಜೆಯಂತಿರುವ ವಿದ್ಯಾಹೀನರಾದ ಅರಸರು ವಿದ್ಯಾಭೂಷಿತರನ್ನು ಹೇಗೆ ಪೋಷಿಸಬಲ್ಲರು? ವಿದ್ಯಾವಂತ ದೊರೆಯಿಂದಲೇ ವಿದ್ವಾಂಸರಿಗೆ ಉತ್ತೇಜನ ಸಾಧ್ಯ. ಕರ್ನಾಟಕದಲ್ಲಿ ಆಗಿಹೋದಂತಹ ಮುಖ್ಯ ಮನೆತನಗಳ ಹಲವಾರು ಅರಸರು ಅನೇಕ ವಿದ್ಯಾಪಾರಂಗತರಿದ್ದರೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಕದಂಬವಂಶದ ಸಂಸ್ಥಾಪಕನಾದ ಮಯೂರಶರ್ಮನು ವೀರಶರ್ಮನೆಂಬ ಗುರುವಿನ ಹತ್ತಿರ ವಿದ್ಯಾಭ್ಯಾಸ ಮಾಡಿದನು. ನಂತರ ಉಚ್ಚ ಶಿಕ್ಷಣಕ್ಕಾಗಿ ಆಗಿನ ದಿನಗಳಲ್ಲಿ (ಕ್ರಿ. ಶ. ೪ನೇ ಶತಮಾನ) ದಕ್ಷಿಣದಲ್ಲಿಯ ಪ್ರಮುಖ ವಿದ್ಯಾಕೇಂದ್ರವಾದ ಕಾಂಚಿಯ ಘಟಿಕೆಗೆ ತನ್ನ ಗುರುವಿನೊಂದಿಗೆ

ಹೋಗಿದ್ದನು. ಕಾಂಚಿಯಲ್ಲಿ ಈತನಿಗೂ ಅಲ್ಲಿಯ ಒಡೆಯನಾದ ಪಲ್ಲವನಿಗೂ ಯಾವುದೋ ಕಾರಣಕ್ಕಾಗಿ ನ್ಯಾಯವುಂಟಾಯಿತು. ಸಿಟ್ಟಿಗೆದ್ದ ಮಯೂರಶರ್ಮನು ಪಲ್ಲವರನ್ನು ಸೋಲಿಸುವ ಪಣತೊಟ್ಟು ಲೇಖನಿಗೆ ಬದಲಾಗಿ ಕತ್ತಿಯನ್ನು ಹಿಡಿದು ತನ್ನ ನಾಡಿಗೆ ಹಿಂತಿರುಗಿ ಕದಂಬ ರಾಜ್ಯವನ್ನು ಸ್ಥಾಪಿಸಿ ಪಲ್ಲವರ ಕೆಲವು ಪ್ರದೇಶಗಳನ್ನು ತನ್ನ ರಾಜ್ಯಕ್ಕೆ ಸೇರಿಸಿದನು. ರಾಜನಾದಮೇಲೆ ತನ್ನ ಪೂರ್ವಜರು ಸ್ಥಾಪಿಸಿದ ತಾಳಗುಂದ ಅಗ್ರಹಾರಕ್ಕೆ ೧೪೪ ಗ್ರಾಮಗಳನ್ನು ದಾನ ಮಾಡಿದನಂತೆ. ಇವನ ತರುವಾಯ ಆಳಿದ ವಿದ್ಯಾ ಪಕ್ಷಪಾತಿ ಕದಂಬ ಅರಸರಲ್ಲಿ ಮೃಗೇಶವರ್ಮನನ್ನು ಉಲ್ಲೇಖಿಸಬಹುದು. ಆತನು ರಾಜ್ಯಾಡಳಿತದಲ್ಲಿ ಚತುರನಾಗಿದ್ದನಲ್ಲದೇ, ತನ್ನ ಆಸ್ತಿಯನ್ನೆಲ್ಲಾ ಬ್ರಾಹ್ಮಣರು, ಮುನಿಗಳು, ಗುರುಗಳು ಮತ್ತು ವಿದ್ವಾಂಸರೊಂದಿಗೆ ಅನುಭವಿಸಿದನಂತೆ. ತಲಕಾಡಿನ ಗಂಗರಲ್ಲಿ (ಕ್ರಿ. ಶ. ೩೫೦ ರಿಂದ ೧೦೫೦) ಅನೇಕ ರಾಜರು ವಿದ್ಯಾವಂತರಿದ್ದರು. ಅವರಲ್ಲಿ ಇಬ್ಬರ ಬಗ್ಗೆ ಹೇಳಬಹುದು. ದುರ್ವಿನೀತನು (ಕ್ರಿ. ಶ. ೪೮೫ ರಿಂದ ೫೨೨) ಅದ್ವಿತೀಯ ವಿದ್ವಾಂಸನಾಗಿದ್ದ. ಈತನು ಶಬ್ದಾನುಸಾರವೆಂಬ ವ್ಯಾಕರಣದ ಕರ್ತೃವಲ್ಲದೇ ಪೈಶಾಚಿ ಭಾಷೆಯಲ್ಲಿದ್ದ ಕತೆಗಳನ್ನು ಸಂಸ್ಕೃತಕ್ಕೆ ಪರಿವರ್ತಿಸಿದನು. ಭಾರವೀ ಕಿರಾತಾರ್ಜುನೀಯಕ್ಕೆ (೧೫ನೇ ಸರ್ಗ) ಟೀಕೆಯನ್ನು ಬರೆದನು. ನೀತಿಶಾಸ್ತ್ರ, ಪ್ರವಚನ ಪ್ರಯೋಗಗಳಲ್ಲಿ ಚಾಣಕ್ಯ, ಗಾಂಧರ್ವವಿದ್ಯೆ, ನಾಟ್ಯಶಾಸ್ತ್ರಗಳಲ್ಲಿ ತುಂಬುರು, ನಾರದ, ಭರತ ಮತ್ತು ಕಂಬಲಾಚಾರ್ಯರನ್ನು ಮೀರಿಸಿದ್ದ. ಆಯುರ್ವೇದದಲ್ಲಿ ಚರಕ–ಧನ್ವಂತರಿಗಳಿಗೆ ಸಮಾನನಾಗಿದ್ದ. ಸಾಮುದ್ರಿಕವನ್ನು ಬಲ್ಲವನಾಗಿದ್ದ.

ನರಸಿಂಹನೆ ಸತ್ಯವಾಕ್ಯನೆಂಬ ಇನ್ನೊಬ್ಬ ಗಂಗ ದೊರೆಯೂ ಸುಶಿಕ್ಷಿತನಿದ್ದ. ರಾಜ್ಯಶಾಸ್ತ್ರ, ಕುದುರೆ ಮತ್ತು ಆನೆಗಳ ಸವಾರಿ, ಚೆಂಡಾಟ, ಧನುರ್ವೇದ, ಕತ್ತಿವರಸೆ, ನಾಟಕ, ವ್ಯಾಕರಣ, ವೈದ್ಯಶಾಸ್ತ್ರ, ಕಾವ್ಯ, ಗಣಿತ, ಭರತಶಾಸ್ತ್ರ, ಇತಿಹಾಸ,ಪುರಾಣ, ನರ್ತನ, ಸಂಗೀತ ಇವುಗಳನ್ನು ಚಿಕ್ಕಂದಿನಲ್ಲೇ ಕಲಿತಿದ್ದನಂತೆ.

ಬಾದಾಮಿಯ ಚಾಲುಕ್ಯರಲ್ಲಿ (ಸು. ೫೫೫–೭೫೫) ಮೊದಲನೇ ಪುಲಿಕೇಶಿಯು ಮನು, ಪುರಾಣ ಮತ್ತು ರಾಜ್ಯ-ಶಾಸ್ತ್ರಗಳಲ್ಲಿ ನುರಿತವನಾಗಿದ್ದನು. ಮಂಗಳೇಶನ ಮನಸ್ಸು ಶಾಸ್ತ್ರಗಳ ಅಭ್ಯಾಸದಿಂದ ಪಕ್ವವಾಗಿತ್ತು. ಆತ ರಾಯಭಾರಶಾಸ್ತ್ರದಲ್ಲಿಯೂ ತಜ್ಞನಾಗಿದ್ದ. ಎರಡನೇ ಪುಲಿಕೇಶಿಯೂ ವಿದ್ಯಾಪಕ್ಷಪಾತಿಯಾಗಿದ್ದನೆಂಬುದು ಆತನ ದಾನಗಳಿಂದ ಮತ್ತು ಆತನು ರವಿಕೀರ್ತಿ ಪಂಡಿತನಿಗೆ ಕೊಟ್ಟ ಆಶ್ರಯದಿಂದ ಸ್ಪಷ್ಟವಾಗುವದು.

ರಾಷ್ಟ್ರಕೂಟರಲ್ಲಿ (ಕ್ರಿ.ಶ. ೭೫೫ ರಿಂದ ೯೭೩) ನೃಪತುಂಗ ಅಥವಾ ಮೊದಲನೇ ಅಮೋಘವರ್ಷದೊರೆ ಕವಿಯೆಂದೂ ಕವಿಗಳ ಪೋಷಕನೆಂದೂ ಪ್ರಸಿದ್ಧನಾಗಿದ್ದ. ಆದಿಪುರಾಣದ ಕರ್ತೃ ಜಿನಸೇನನು ಈತನ ಗುರುವಾಗಿದ್ದ. ಇದೇ ದೊರೆ ಅಥವಾ ಈತನ ಆಸ್ಥಾನ ಕವಿಯೊಬ್ಬ ಕನ್ನಡದಲ್ಲಿ ಮೊದಲನೇ ಗ್ರಂಥವಾದ ಕವಿರಾಜಮಾರ್ಗ ಗ್ರಂಥವನ್ನು ಬರೆದನು. ಈತನ ತರುವಾಯ ಬಂದ ಇಮ್ಮಡಿ ಕೃಷ್ಣರಾಜನಿಗೆ ಆದಿಪುರಾಣದ ಉತ್ತರ ಭಾಗವನ್ನು ಬರೆದ ಗುಣಭದ್ರನು ಗುರುವಾಗಿದ್ದನು. ಕೊನೆಯ ರಾಷ್ಟ್ರಕೂಟರಲ್ಲಿ ಒಬ್ಬನಾದ ನಾಲ್ಕನೆಯ ಗೋವಿಂದ

ದೊರೆ ವಿದ್ವಾಂಸರಿಗೆ ಮಾಡಿದಷ್ಟು ಗ್ರಾಮದಾನವನ್ನಾಗಲೀ, ದ್ರವ್ಯದಾನವನ್ನಾಗಲೀ ಇನ್ನಾವ ಅರಸನೂ ಮಾಡಿರಲಿಕ್ಕಿಲ್ಲ.

ಕಲ್ಯಾಣದ ಚಾಲುಕ್ಯ(೯೭೩-೧೨೦೦)ರಲ್ಲಿ ಮೂವರ ಹೆಸರನ್ನು ಈ ಸಂದರ್ಭದಲ್ಲಿ ಹೇಳಬಹುದು. ಮೊದಲನೇ ಸೋಮೇಶ್ವರನು ವೇದ, ಆಗಮ, ಇತಿಹಾಸಗಳನ್ನು ಕಲಿತಿದ್ದನೆಂದೂ, ತನ್ನ ಗುರುಗಳನ್ನು ಪೂಜ್ಯಭಾವದಿಂದ ನೋಡುತ್ತಿದ್ದನೆಂದೂ ಹೇಳಲಾಗಿದೆ. ವಿಕ್ರಮಾಂಕದೇವ ಚರಿತವನ್ನು ಬರೆದ ಬಿಲ್ಹಣನು ತನ್ನ ಆಶ್ರಯದಾತ ವಿಕ್ರಮನು (೧೦೭೬–೧೧೨೬) ಬಾಲ್ಯದಲ್ಲಿಯೇ ಎಲ್ಲ ಲಿಪಿಗಳನ್ನು ಕಲಿತನೆಂದೂ ಮುಂದೆ ಒಳ್ಳೆಯ ಕವಿ ಮತ್ತು ವಾಗ್ಮಿಯಾದನೆಂದೂ ಬರೆದಿದ್ದಾನೆ. ವಿಕ್ರಮಾದಿತ್ಯನ ಮಗ ಮೂರನೇ ಸೋಮೇಶ್ವರನು ತನ್ನ ಗ್ರಂಥ ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥಚಿಂತಾಮಣಿ ಎಂಬ ಗ್ರಂಥದಲ್ಲಿ ರಾಜಕುಮಾರರು ಕಲಿಯಬೇಕಾದ ವಿದ್ಯೆಗಳನ್ನೆಲ್ಲ ನಮೂದಿಸಿದ್ದಾನೆ. ವೇದ, ವ್ಯಾಕರಣ, ಧರ್ಮ. ಕಲೆ ಇವುಗಳನ್ನು ಕಲಿಯುವದಲ್ಲದೇ ರಾಜಕುಮಾರರು ಧನುರ್ವೇದದ ತತ್ವ ಮತ್ತು ಆಚರಣೆಗಳನ್ನು ತಿಳಿದುಕೊಂಡಿರಬೇಕಾಗಿತ್ತಂತೆ.

ಹೊಯ್ಸಳರ (ಸು. ೧೦೦೦–೧೩೪೬) ವಿಷ್ಣುವರ್ಧನ ದೊರೆ ವಿದ್ವಾಂಸರ ಗೋಷ್ಠಿಗಳಲ್ಲಿ ಚತುರವಾದಿಯುಳ್ಳವನೆಂದು, ಭರತ ವಿದ್ಯೆಯ ಗಂಭೀರ ಭಾವವನ್ನು ಅರಿತವನೆಂದು ಪ್ರಸಿದ್ಧನಾಗಿದ್ದನು. ಇವನ ತರುವಾಯ ಬಂದ ವೀರಬಲ್ಲಾಳನ ಬಗ್ಗೆ ಒಂದು ಶಾಸನದಲ್ಲಿ ಹೀಗಿದೆ—ಚಿಕ್ಕಂದಿನಿಂದ ಅಭ್ಯಾಸಮಾಡಿ ದೊರಕಿಸಿದ ಅವನ ವಿದ್ವತ್ತನ್ನು ಹೇಗೆ ವರ್ಣಿಸುವದು? ಅದೇ ಶಾಸನ ಅದಕ್ಕೆ ಮುಂದೆ ಉತ್ತರ ಕೊಡುತ್ತದೆ. ಆತನ

ಚೇಷ್ಟೆಯ ಮಾತುಗಳಿಂದಲೇ ಎಲ್ಲ ಕಲೆಗಳಲ್ಲಿ ಅವನಿಗಿರುವ ಪಾಂಡಿತ್ಯವನ್ನು ನಾವು ತಿಳಿಯಬಹುದು.

ರಾಜಕುಮಾರರ ವಿದ್ಯಾಭ್ಯಾಸದ ವಿಷಯವನ್ನು ಮುಗಿಸುವ ಮೊದಲು ಇವರ ಗುರುಗಳಲ್ಲಿ ಪ್ರಸಿದ್ಧರಾದವರ ಬಗ್ಗೆ ಒಂದೆರಡು ಮಾತು ಹೇಳಬಹುದು. ವಾದಿಘಂಘಳ ಭಟ್ಟನೆಂಬ ರಾಜಗುರು ಗಂಗರ ಆಸ್ಥಾನದಲ್ಲಿದ್ದನು. ಗಂಗ ಮಾರಸಿಂಹನ ಕೂಡಲೂರ ಶಾಸನವು (೯೬೨ ಕ್ರಿ. ಶ.) ಅವನು ಎಂಥವ ಶ್ರೇಷ್ಠ ತರಗತಿಯ ಉಪಾಧ್ಯಾಯನೆಂಬುವದನ್ನು ಬಣ್ಣಿಸುತ್ತದೆ. ಶ್ರೀಧರ ಭಟ್ಟನೆನ್ನುವ ವಿದ್ವಾಂಸನು ಕರಾಟ ದೇಶದ ಅಗ್ರಹಾರ ಪಿಪ್ಪಲದಲ್ಲಿ ಜನಿಸಿದನು. ಈತನ ಮಗ ಅಮೃತಭಟ್ಟ. ಆತನ ಮಗನೇ ಮುಂಜಾರ್ಯ ಅಥವಾ ವಾದಿಘಂಘಳ ಭಟ್ಟ. ಈತನಿಗೆ ಪೂರ್ವ ಜನ್ಮದಲ್ಲಿ ಸಿದ್ಧವಾಗಿದ್ದ ವಿದ್ಯೆ ಈ ಜನ್ಮದಲ್ಲಿ ಸ್ವಾಭಾವಿಕವಾಗಿ ಬಂದಿತು. ಈತನು ವ್ಯಾಕರಣದಲ್ಲಿ ಒಂದು ಹೊಸ ಪದ್ಧತಿಯನ್ನು ನಿರ್ಮಿಸಿದನು. (ಬಹುಶಃ ಪುಸ್ತಕವನ್ನು ಬರೆದಿರಬಹುದು.) ಈ ಪದ್ಧತಿ ಯಾವ ವಾದವಿವಾದಕ್ಕಾಗಲಿ, ಶಂಕೆಗಾಗಲಿ ಅವಕಾಶ ಕೊಡುತ್ತಿರಲಿಲ್ಲ. ತರ್ಕಶಾಸ್ತ್ರದ ಮೂರು ಶಾಖೆಗಳಲ್ಲಿಯೂ, ಲೋಕಾಯತ, ಸಾಂಖ್ಯ, ವೇದಾಂತ ಮತ್ತು ಬೌದ್ಧ ತತ್ವಗಳಲ್ಲಿಯೂ ಈತನು ಪರಿಣತನಿದ್ದನು. ಜೈನ ಮತದಲ್ಲಿ ಇಂಥ ವಾದಿಘಂಘಳ ಭಟ್ಟನೆಂದು ಖ್ಯಾತಿ ಹೊಂದಿದ್ದನು. ಈ ಬಿರುದನ್ನು ಸಂಪಾದಿಸಲಿಕ್ಕೆ ವಿರುದ್ಧ ಮತದವರನ್ನು ಅವನು ವಾದದಲ್ಲಿ ತನ್ನ ವಾಗ್ಮಿತ್ವದಿಂದ ಸೋಲಿಸಿದನು.

ಇವನು ರಾಜಕುಲಗಳಿಗೆ ಗುರುವಾದನು. ಈತನ ಸಾಹಿತ್ಯದಲ್ಲಿ ಪ್ರಾವೀಣ್ಯ ಗಂಗರಾಜ ಮಾರಸಿಂಹನನ್ನು ಈತನ ಶಿಷ್ಯನನ್ನಾಗಿ

ಮಾಡಿತು. ಈತನ ರಾಜನೀತಿ ಕಲಿಸುವ ಚಾತುರ್ಯವು ರಾಷ್ಟ್ರಕೂಟರ ವಲ್ಲಭರಾಜನ ಆಸ್ಥಾನದವರು ಇವನನ್ನು ಆದರಿಸುವ ಹಾಗೆ ಮಾಡಿತು. ರಾಷ್ಟ್ರಕೂಟರ ಕೃಷ್ಣನು ಈತನ ಮಂತ್ರೋಪದೇಶದಿಂದ ಅನೇಕ ದೇಶಗಳನ್ನು ಗೆದ್ದನಲ್ಲದೇ ದುರ್ಮಾರ್ಗದಿಂದ ಸನ್ಮಾರ್ಗಕ್ಕೆ ಬಂದು ಜೈನ ಮತಾವಲಂಬಿಯಾಗಿ, ಬ್ರಾಹ್ಮಣರಿಗೂ, ಋಷಿಗಳಿಗೂ ದಾನ ಮಾಡಿ, ಆಶ್ರಯವಿಲ್ಲದವರನ್ನು ಸಂತೈಸಿದನು. ಈ ಜಗತ್ತಿನಲ್ಲಿ ಶ್ರುತಗುರುವೆಂದು ಈತ ಖ್ಯಾತಿ ಹೊಂದಿದ್ದ.

## ಬೌದ್ಧ ವಿದ್ಯಾಭ್ಯಾಸ ಕ್ರಮ

ರಾಜರ ಶಿಕ್ಷಣ ಕ್ರಮದ ಬಗ್ಗೆ ತಿಳಿದುಕೊಂಡನಂತರ ಸಾಮಾನ್ಯ ಪ್ರಜೆಗಳ ವಿದ್ಯಾಭ್ಯಾಸದ ಕಡೆಗೆ ತಿರುಗಬಹುದು. ಮೌರ್ಯರ ಕಾಲದಿಂದ ರಾಷ್ಟ್ರಕೂಟರ ಕಾಲದವರೆಗೆ ವೈದಿಕ ಮತ್ತು ಜೈನ ಪದ್ಧತಿಗಳೊಂದಿಗೆ ಬೌದ್ಧ ವಿದ್ಯಾಭ್ಯಾಸ ಕ್ರಮವೂ ಕರ್ನಾಟಕದಲ್ಲಿ ಇರಲಿಕ್ಕೆ ಸಾಕು. ಮೊದಲಿನೆರಡೂ ಶಿಕ್ಷಣ ಕ್ರಮದಲ್ಲಿ ಸಾಮ್ಯ ಹೆಚ್ಚಾಗಿದ್ದು ಅವನ್ನು ಮುಂದೆ ವಿವರಿಸಲಾಗಿದೆ. ಬೌದ್ಧ ಕ್ರಮದ ಬಗ್ಗೆ ಸ್ವಲ್ಪ ಹೇಳಬಹುದಾಗಿದೆ. ಬೌದ್ಧ ವಿದ್ಯಾಸಂಸ್ಥೆಗಳಿಗೆ ವಿಹಾರಗಳೆನ್ನುತ್ತಿದ್ದರು. ಮೂರನೇ ಶತಮಾನದ ಬನವಾಸಿಯ ಶಾಸನವು ಅಲ್ಲಿಯ ಶಿವಸ್ಕಂದ ನಾಗಶ್ರೀಯೆನ್ನುವ ರಾಜಕುಮಾರಿಯು ಅದೇ ಊರಿನಲ್ಲಿ ಒಂದು ವಿಹಾರವನ್ನು ಕಟ್ಟಿಸಿದಳೆಂದು ಹೇಳುತ್ತದೆ. ಈಗ ದೊರೆತಿರುವ ಆಧಾರಗಳ ಮೇಲಿಂದ ಈ ವಿಹಾರವು ಕರ್ನಾಟಕದಲ್ಲಿಯ ಮೊದಲನೇ ಬೌದ್ಧ ವಿದ್ಯಾಸಂಸ್ಥೆಯೆಂದು ಹೇಳಬಹುದು. ಮುಂದೆ ಕರ್ನಾಟಕದಲ್ಲಿ ಯಾವ ಯಾವಾಗ ಇಂತಹ ವಿಹಾರ

ಗಳನ್ನು ಸ್ಥಾಪಿಸಿದರೆನ್ನುವದಕ್ಕೆ ದೊರೆಯುವ ಉಲ್ಲೇಖಗಳು ಕಡಿಮೆ. ಕಾರವಾರ ಜಿಲ್ಲೆಯ ಹಿರೇಗುತ್ತಿ ಮತ್ತು ಗೋವಾ ಪ್ರದೇಶದ ಶಾಸನಗಳಲ್ಲಿ ವಿಹಾರ ಸ್ಥಾಪನೆಯಾಗಿದ್ದ ಉಲ್ಲೇಖವಿದೆ. ಆದರೆ ಕರ್ನಾಟಕದ ಇತರ ಪ್ರದೇಶಗಳಲ್ಲೂ ಬೌದ್ಧ ವಿಹಾರಗಳು ಇರಲಿಕ್ಕೆ ಸಾಕು. ಏಕೆಂದರೆ ಏಳನೆಯ ಶತಮಾನದಲ್ಲಿ ಎರಡನೆಯ ಪುಲಿಕೇಶಿಯ ರಾಜ್ಯವನ್ನು ಸಂದರ್ಶಿಸಿದ ಬೌದ್ಧ ಪ್ರವಾಸಿ ಹುಯೆನ್‌ತ್ಸಾಂಗನು ಕರ್ನಾಟಕ-ಮಹಾರಾಷ್ಟ್ರಗಳಲ್ಲಿ ನೂರಕ್ಕಿಂತ ಹೆಚ್ಚು ವಿಹಾರಗಳಿದ್ದವೆಂದೂ ಅವುಗಳಲ್ಲಿ ೫,೦೦೦ ಭಿಕ್ಷುಗಳಿದ್ದರೆಂದೂ ಬರೆಯುತ್ತಾನೆ. ಪುಲಿಕೇಶಿಯ ಪ್ರಜೆಗಳು ವಿದ್ಯಾಪಕ್ಷಪಾತಿಗಳಿದ್ದರೆಂದು ಹೇಳಿದ್ದಾನೆ. ಇಲ್ಲಿ ವಿಹಾರಗಳಲ್ಲಿಯೂ ನಡೆಯುತ್ತಿದ್ದ ವಿದ್ಯಾಭ್ಯಾಸ ಕ್ರಮವನ್ನು ಅವನು ಈ ರೀತಿಯಾಗಿ ವಿವರಿಸಿದ್ದಾನೆ.

"ಪ್ರಾರಂಭದಲ್ಲಿ ಚಿಕ್ಕ ಮಕ್ಕಳಲ್ಲಿ ವಿದ್ಯೆಯ ಬಗ್ಗೆ ಆದರ ಹುಟ್ಟಿಸುವ ಸಲುವಾಗಿ "ಸಿದ್ಧಿರಸ್ತು ಅಧ್ಯಾಯ"ಗಳೆನ್ನುವ ಒಂದು ಚಿಕ್ಕ ಪುಸ್ತಕವನ್ನು ಕಲಿಸುತ್ತಾರೆ. ಈ ಚಿಕ್ಕ ಸಂಸ್ಕೃತ ಪುಸ್ತಕದಲ್ಲಿ ಅಕ್ಷರಗಳೂ, ಜೋಡಕ್ಷರಗಳೂ ಇರುವವು."

"ಏಳು ವರ್ಷಗಳಾದ ಮೇಲೆ ಮಕ್ಕಳಿಗೆ ೫ ಶಾಸ್ತ್ರಗಳನು ಒಂದಾದ ಮೇಲೊಂದು ಕಲಿಸುತ್ತಾರೆ. ಮೊದಲನೆಯ ಶಾಸ್ತ್ರ ವ್ಯಾಕರಣ. ಇದರಲ್ಲಿ ಶಬ್ದಗಳನ್ನು ಮತ್ತು ಅವುಗಳ ವಿಂಗಡಣೆಯನ್ನು ಹೇಳಿಕೊಡುತ್ತಾರೆ. ಎರಡನೆಯದಾಗಿ ಅವರಿಗೆ ಕುಶಲ ಕೈಗಾರಿಕೆಗಳಿಗೆ ಅವಶ್ಯಕವಾದ ಯಾಂತ್ರಿಕ ಕಲೆಯನ್ನು ಮತ್ತು ಜ್ಯೋತಿಷ ಶಾಸ್ತ್ರವನ್ನು ಕಲಿಸುತ್ತಾರೆ. ಮೂರನೆಯದಾಗಿ ವೈದ್ಯಶಾಸ್ತ್ರ, ಶಸ್ತ್ರಚಿಕಿತ್ಸೆ ಮತ್ತು ಮಂತ್ರ-ತಂತ್ರಗಳನ್ನು

ಬೋಧಿಸುತ್ತಾರೆ. ನಾಲ್ಕನೆಯದಾಗಿ ತರ್ಕಶಾಸ್ತ್ರವನ್ನು, ನಂತರ ಬೌದ್ಧ ಮತ್ತು ಇತರ ಧರ್ಮಗಳ ತುಲನಾತ್ಮಕ (ಸತ್ಯ-ಅಸತ್ಯಗಳ) ಸ್ವರೂಪವನ್ನು ತಿಳಿಯಪಡಿಸುತ್ತಾರೆ. ಐದನೆಯದಾಗಿ ಮೋಕ್ಷ ಸಾಧನೆಗೆ ಬೇಕಾದ ಕರ್ಮ, ಜ್ಞಾನ, ವೈರಾಗ್ಯ ಮಾರ್ಗಗಳನ್ನು ಬೋಧಿಸುತ್ತಾರೆ."

ಬಾದಾಮಿ ಚಾಲುಕ್ಯರ ಕಾಲದ ನಂತರ ಕರ್ನಾಟಕದಲ್ಲಿ ಬೌದ್ಧ ವಿಹಾರಗಳು ನಶಿಸಿದ ಹಾಗೆ ಕಾಣುತ್ತವೆ. ಮುಸಲ್ಮಾನರು ಉತ್ತರ ಹಿಂದುಸ್ಥಾನದಲ್ಲಿಯ ಬೌದ್ಧ ವಿಹಾರಗಳನ್ನು ನಾಶ ಮಾಡಿದ ಮೇಲೆ, ನಾಲಂದ, ವಿಕ್ರಮಶೀಲ ಮತ್ತು ಇತರ ಕಡೆಗಳಿಂದ ಭಿಕ್ಷುಗಳು ದಕ್ಷಿಣಕ್ಕೆ ಓಡಿ ಬಂದರು. ಡಂಬಳ ಮತ್ತು ಬಳ್ಳಿಗಾವೆಗಳಲ್ಲಿ ೧೧ ಮತ್ತು ೧೨ ನೇ ಶತಮಾನದಲ್ಲಿ ಸ್ಥಾಪನೆಯಾದ ವಿಹಾರಗಳು ಇಂಥವಿರಬಹುದು. ಇಂಡಿ (ವಿಜಾಪುರ) ಮತ್ತು ಕೋಳಿವಾಡ (ಧಾರವಾಡ ಜಿಲ್ಲೆ) ಗಳಲ್ಲಿ ಬೌದ್ಧರಿದ್ದ ಉಲ್ಲೇಖವಿದೆ. ಬಳ್ಳಿಗಾವಿಯಲ್ಲಿ ಬೌದ್ಧ ತತ್ವಗಳನ್ನು ಬೌದ್ಧರ ಹೊರತಾಗಿ ಇತರರೂ ಅಭ್ಯಸಿಸುತ್ತಿದ್ದರು.

## ವೈದಿಕ ಮತ್ತು ಜೈನ ಶಿಕ್ಷಣ ಪದ್ಧತಿ-ಬಾಲಶಿಕ್ಷೆ

ಬೌದ್ಧ ಸಂಸ್ಥೆಗಳನ್ನು ಪ್ರತ್ಯೇಕಿಸಿದರೆ, ಜೈನ ಮತ್ತು ವೈದಿಕ ಪದ್ಧತಿಯು ಶಿಕ್ಷಣ ಪದ್ಧತಿಯ ತಳಹದಿಯನ್ನು ಜೈನರು ಹಾಕಿದರು. ದಕ್ಷಿಣದ ಭಾಷೆಗಳಲ್ಲಿ ಕನ್ನಡ, ತೆಲುಗು ಮತ್ತು ತಮಿಳುಗಳಲ್ಲಿ ಮೊದಲಿನ ಸಾಹಿತ್ಯ ನಿರ್ಮಾಣ ಜೈನರಿಂದಲೇ ಆಯಿತು. ಪ್ರಾಥಮಿಕ ಶಿಕ್ಷಣ ಕ್ರಮಕ್ಕೂ ಜೈನರದೇ

ಅಡಿಗಲ್ಲು ಇದೆ. ಇವತ್ತಿಗೂ ಆಂಧ್ರ, ತಮಿಳುನಾಡು, ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಚಿಕ್ಕ ಮಕ್ಕಳಿಗೆ ಅಕ್ಷರಾಭ್ಯಾಸದ ಮೊದಲಿಗೆ ಕಲಿಸುವ "ಓಂ ನಮಃ ಸಿದ್ಧಂ" ಎಂಬ ಪ್ರಾರ್ಥನೆ ಜೈನ[1] ಸಂಪ್ರದಾಯವನ್ನು ಎತ್ತಿ ತೋರಿಸುತ್ತದೆ. ಪ್ರಾಚೀನ ಶಾಸ್ತ್ರಗಳಲ್ಲಿ ವಿದ್ಯಾಭ್ಯಾಸದ ಬಗ್ಗೆ ದೊರೆಯುವ ಮಾಹಿತಿಯೆಲ್ಲ ಉಚ್ಚ ಶಿಕ್ಷಣದ ಬಗೆಗೆ ಇದೆ. ಪ್ರಾಥಮಿಕ ವಿದ್ಯಾಭ್ಯಾಸದ ಬಗ್ಗೆ ಅಲ್ಲಿ ಇಲ್ಲಿ ಮಾತ್ರ ಉಲ್ಲೇಖವಿದೆ. ಈ ವಿದ್ಯಾಭ್ಯಾಸಕ್ಕೆ ಬಾಲಶಿಕ್ಷೆ, ಕರ್ನಾಟಶಿಕ್ಷೆ, ಕರ್ನಾಟ ಬಾಲಶಿಕ್ಷೆ ಮತ್ತು ಅಕ್ಷರ ಶಿಕ್ಷೆಯೆಂದು ಕರೆದಿದ್ದಾರೆ. ಅದನ್ನು ಕಲಿಸುವ ಉಪಾಧ್ಯಾಯರಿಗೆ ಕರ್ನಾಟಕ ಪಂಡಿತ ಎಂದು ಕೆಲವು ಕಡೆ ಕರೆದಿದ್ದಾರೆ. ಬಾಲಶಿಕ್ಷೆಗಾಗಿ ಪ್ರತ್ಯೇಕ ಉಪಾಧ್ಯಾಯನು ಇಲ್ಲದ ಕಡೆಗೆ ಪುರಾಣ ಭಟ್ಟರೇ ಅವರ ಕೆಲಸವನ್ನು ಮಾಡುತ್ತಿದ್ದರು. ತುಮಕೂರ ಜಿಲ್ಲೆಯ ಸಿಟ್ಟಿಕೆರೆ ಗ್ರಾಮದಲ್ಲಿ ಪುರಾಣ ಭಟ್ಟರಿಗೆ ಒಂದು ಜಮೀನನ್ನು ಇನಾಂ ಆಗಿ ಕೊಟ್ಟಿದ್ದರು. ಇದಕ್ಕಾಗಿ ಅವನಿಗೆ ಕೊಟ್ಟ ಕೆಲಸವೆಂದರೆ ಸಂಜೆ ನಾಲ್ಕು ಘಳಿಗೆ ಪುರಾಣವನ್ನು ಓದುವದು ಮತ್ತು ಮಿಕ್ಕ ವೇಳೆಯಲ್ಲಿ ಚಿಕ್ಕ ಮಕ್ಕಳ ಪಾಠವನ್ನು ತಪ್ಪದೇ ಕೇಳುವನು.

ಅರಸೀಕೆರೆಯ ಹತ್ತಿರ ಇರುವ ನರಸಿಂಗಪುರ ಅಗ್ರಹಾರದಲ್ಲಿ ಬಾಲಶಿಕ್ಷೆಯ ವ್ಯವಸ್ಥೆ ಅತ್ಯಂತ ಸಮರ್ಪಕವಾಗಿತ್ತು. ಈ ಅಗ್ರಹಾರದ ಹೆಗ್ಗಡೆ ಎರೆಯಣ್ಣನು ಬಾಲಶಿಕ್ಷೆಗೆಂದು ಬಾಲಕರಿಗಾಗಿ ಒಂದು ಮನೆಯನ್ನು ಕಟ್ಟಿಸಿಕೊಟ್ಟು, ಕಲಿಸುವದಕ್ಕೆ ಬೋವಿಯ ಸಾವಿಯಣ್ಣ ಎನ್ನುವ ಉಪಾಧ್ಯಾಯನನ್ನು ನೇಮಿಸಿದ್ದನು. ಆತನಿಗೆ ೧೨ ಬಾಲಕರಿಗೆ ಕಲಿಸಿದ್ದಕ್ಕೆ ೨೦ ಗದ್ಯಾಣಗಳ ಪಗಾರವನ್ನು ಗೊತ್ತು ಮಾಡಿದನು. ಈ

೧. ಅಥವಾ ಬೌದ್ಧ

ಹುಡುಗರಿಗೆ ಅಡಿಗೆ ಮಾಡಲು ಅಡಿಗೆಯವಳನ್ನು ೩ ಗದ್ಯಾಣ ಪಗಾರದ ಮೇಲೆ ನೇಮಿಸಲಾಗಿತ್ತು.

ಇನ್ನೊಂದು ಶಾಲೆ ಸ್ಥಾಪನೆಯಾದ ರೀತಿಯೂ ಕುತೂಹಲಕಾರಿಯಾಗಿದೆ. ಈ ಶಾಲೆಯನ್ನು ಸ್ಥಾಪಿಸಲು ಎಲಿಯ ಪುರ್ಬುಳ್ಳಿಯ (ಹುಬ್ಬಳ್ಳಿ) ಮಹಾಜನರು, ಧಾರವಾಡದ ಹತ್ತಿರದ ನವಿಲೂರಿನ ಕುರುಬರ ಸಂಘದವರು ಮುಂದೆ ಬಂದರು. ಈ ಶಾಲೆಯನ್ನು ಹುಬ್ಬಳ್ಳಿಯ ಹತ್ತಿರದ ಉಣಕಲ್ಲಿನ ಒಂದು ದೇವಸ್ಥಾನದಲ್ಲಿಯ ೨೩ ಅಂಕಣ ಉದ್ದ ೨೧ ಅಂಕಣ ಅಗಲ ಇರುವ ಕೋಣೆಯಲ್ಲಿ ನಡೆಸಲು ಅನುಕೂಲ ಮಾಡಿಕೊಟ್ಟರು. ದೇವಸ್ಥಾನದ ಅಥವಾ ಮಠದ ಒಂದು ಭಾಗದಲ್ಲಿ ಶಾಲೆ ನಡೆಸುವ ಪದ್ಧತಿ ಸರ್ವ ಸಾಮಾನ್ಯವಾಗಿತ್ತು.

ಈ ಬಾಲಶಿಕ್ಷೆಯ ಉಪಾಧ್ಯಾಯರ ವೇತನ ಇತ್ಯಾದಿಗಳ ಬಗ್ಗೆಯೂ ಉಲ್ಲೇಖಗಳಿವೆ. ಈ ಮೊದಲೇ ಹೇಳಿದ ಹಾಗೆ ನರಸಿಂಹಪುರದಲ್ಲಿ ೨೦ ಹುಡುಗರಿಗೆ ಕಲಿಸಲಿಕ್ಕೆ ೧೨ ಗದ್ಯಾಣಗಳನ್ನು ಕೊಡುತ್ತಿದ್ದರು. ( ಗದ್ಯಾಣವೆಂದರೆ ಸುಮಾರು ೬೦ ಗ್ರಾಮ್ ತೂಕದ ಬಂಗಾರದ ನಾಣ್ಯ ). ಇಷ್ಟು ವೇತನ ಬೇರೆ ಕಡೆ ದೊರೆಯುತ್ತಿರಲಿಲ್ಲ. ತಾಳಗುಂದದ ಉಪಾಧ್ಯಾಯರಿಗೆ ಇದೇ ಕೆಲಸಕ್ಕೆ ೫ ಗದ್ಯಾಣಗಳನ್ನು ಕೊಡಲಾಗುತ್ತಿತ್ತು. ಬೇಗಾಂವೆ ಅಗ್ರಹಾರದಲ್ಲಿ ಉಚ್ಚ ವರ್ಗಗಳಿಗೆ ಕಲಿಸುವ ಉಪಾಧ್ಯಾಯನಿಗೆ ೧ ಅಥವಾ ೧/೨ ವೃತ್ತಿಯನ್ನು ಕೊಟ್ಟಿದ್ದರೆ, ಬಾಲಶಿಕ್ಷೆಯ ಉಪಾಧ್ಯಾಯನಿಗೆ ೧/೩ ವೃತ್ತಿಯನ್ನು ಕೊಟ್ಟಿದ್ದರು. ಇದನ್ನು ನೋಡಿದರೆ ಪ್ರಾಥಮಿಕ ಉಪಾಧ್ಯಾಯರಿಗೂ, ಉಚ್ಚ ಶಿಕ್ಷಣಕೊಡುವ ಉಪಾಧ್ಯಾಯರಿಗೂ ದೊರೆಯುತ್ತಿದ್ದ ಸಂಬಳ

ದಲ್ಲಿ ಈಗಿನಂತೆ ಹೆಚ್ಚಿನ ವ್ಯತ್ಯಾಸವಿರಲಿಲ್ಲವೆಂದು ಕಾಣುತ್ತದೆ. ಇನ್ನೊಂದು ವಿಧದಲ್ಲೂ ಆಗಿನ ಉಪಾಧ್ಯಾಯರ ಸ್ಥಿತಿ ಈಗಿನವರಿಗಿಂತ ಉತ್ತಮವಾಗಿದ್ದುದನು ನೋಡಬಹುದು. ನರಸಿಂಹಪುರದ ಶಾಲೆಯ ಉಪಾಧ್ಯಾಯನ ಸಂಬಳ ೨೦ ಗದ್ಯಾಣಗಳಿದ್ದವಷ್ಟೆ? ಶಾಲೆಯ ವಿದ್ಯಾರ್ಥಿಗಳಿಗೆ ಅಡಿಗೆ ಮಾಡಲು ನೇಮಿಸಲ್ಪಟ್ಟ ಅಡಿಗೆಯವಳ ಸಂಬಳ ೩ ಗದ್ಯಾಣವಾಗಿತ್ತು. ಈಗ ಪರಿಸ್ಥಿತಿ ಅದಲುಬದಲಾಗಿದೆ !

ಇನ್ನು ಬಾಲಶಿಕ್ಷೆಯಲ್ಲಿ ಕಲಿಸುತ್ತಿದ್ದ ವಿಷಯಗಳ ಬಗ್ಗೆ ಸ್ವಲ್ಪ ತಿಳಿದುಕೊಳ್ಳಬಹುದು. ಕವಿ ರಾಘವಾಂಕನು ಚಿಕ್ಕಂದಿನಲ್ಲಿ ಧೂಳಾಕ್ಷರಗಳನ್ನು ಕಲಿತನೆಂದು ಕವಿ ಚಿಕ್ಕನಂಜೇಶನು ಬರೆಯುತ್ತಾನೆ. ಬಿಡಿ ಅಕ್ಷರಗಳನ್ನು ಕಲಿತಮೇಲೆ ಜೋಡಾಕ್ಷರಗಳನ್ನು ಕಲಿಯುತ್ತಿದ್ದರು. ಹ್ಯುಯೆನತ್ಸಾಂಗನು ಹನ್ನೆರಡು ಅಧ್ಯಾಯಗಳು ಅನ್ನುವ ಒಂದು ಸಂಸ್ಕೃತ ಪುಸ್ತಕವನ್ನು ಉಲ್ಲೇಖಿಸಿರುವನು ಈ ಪುಸ್ತಕದಲ್ಲಿ ಅಕ್ಷರಗಳನ್ನು, ಜೋಡಾಕ್ಷರಗಳನ್ನು ಬರೆಯುವ ರೀತಿಯನ್ನು ಹೇಳಿದೆ. ಜೋಡಾಕ್ಷರಗಳನ್ನು ಬರೆಯುವ ರೀತಿಗೆ ಮರಾಠಿಯಲ್ಲಿ ಇವತ್ತಿಗೂ ಹನ್ನೆರಡು "ಖಡಿ" ಎನ್ನುತ್ತಾರೆ. ಧೂಳಾಕ್ಷರಗಳ ಜೊತೆಗೆ ಮಗ್ಗಿ ಮತ್ತು ಗಣಿತಗಳನ್ನು ಕಲಿಯುತ್ತಿದ್ದರೆಂದು ಬಾಹುಬಲಿ ಕವಿಯು ನಾಗಕುಮಾರ ಚರಿತೆಯಲ್ಲಿ ಹೇಳುತ್ತಾನೆ. ಬಾಲಶಿಕ್ಷೆಗೆ ಕೆಲವು ಕಡೆಗೆ ಕರ್ನಾಟಕ ಶಿಕ್ಷೆಯೆಂದು ಕರೆದದ್ದರಿಂದ ಕನ್ನಡ ಅಕ್ಷರಗಳನ್ನು ಕಲಿತಮೇಲೆ ಆ ಭಾಷೆಯನ್ನು ಕಲಿಯುತ್ತಿದ್ದರೆಂದು ಸಹಜವಾಗಿ ಊಹಿಸಬಹುದು. ತಾಳಗುಂದದ ಪ್ರಣವೇಶ್ವರ ದೇವಸ್ಥಾನದ ಪ್ರಾಥಮಿಕ ವಿಭಾಗದಲ್ಲಿ ಒಬ್ಬ ಶಿಕ್ಷಕನು ಅಕ್ಷರ

ವನ್ನು ಕಲಿಸುತ್ತಿದ್ದನು. ಇನ್ನೊಬ್ಬನು ಕನ್ನಡವನ್ನು ಕಲಿಸು-ತ್ತಿದ್ದನು.

## ಉಚ್ಚ (ಪ್ರೌಢ) ವಿದ್ಯಾಕೇಂದ್ರಗಳು

ವಿದ್ಯಾದಾನಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡಲಾಗುತ್ತಿತ್ತು ಎಂದು ಬಳ್ಳಿಗಾವೆಯ ಶಾಸನವೊಂದರ ವಿವರಗಳಿಂದ ತಿಳಿದು ಬರುತ್ತದೆ. "ಯಾತ್ರಾಸ್ಥಳಗಳಿಗೆ ಹೋಗಿ ಮತ್ತು ಯಜ್ಞ ಯಾಗಾದಿಗಳನ್ನು ಮಾಡಿ ಬರುವ ಪುಣ್ಯಕ್ಕಿಂತ ವಿದ್ಯಾದಾನ ದಿಂದ ಬರುವ ಪುಣ್ಯವು ಕೋಟಿ ಪಟ್ಟು ಹೆಚ್ಚಾಗಿರುತ್ತದೆ" ಎಂದು ಅದರಲ್ಲಿ ಹೇಳಿದೆ. ಭೂದಾನ, ವಿದ್ಯಾದಾನ ಮತ್ತು ಪುಸ್ತಕ ದಾನಗಳು ಅಷ್ಟೇ ಪುಣ್ಯವನ್ನು ತರುತ್ತವೆ ಎಂದು ಅಗ್ನಿ ಪುರಾಣವು ಹೇಳುತ್ತದೆ. ವೇದ, ಸಂಗೀತ, ನರ್ತನಗಳ ಉಪಾ-ಧ್ಯಾಯರು ಸ್ವರ್ಗಕ್ಕೆ ಹೋಗುತ್ತಾರೆಂದು ಅದೇ ಪುರಾಣದಲ್ಲಿ ಹೇಳಿದೆ. ಇಂಥ ಭಾವನೆಗಳು ಜನರಿಗೆ ಆಕರ್ಷಕವಾಗಿದ್ದ ಕಾಲದಲ್ಲಿ ವಿದ್ಯಾಸಂಸ್ಥೆಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿದ್ದುದು ಸಹಜವಾಗಿದೆ.

ತಪೋವನ, ಘಟಿಕಾಸ್ಥಾನ, ಅಗ್ರಹಾರ, ಮಠ ಮತ್ತು ದೇವಸ್ಥಾನಗಳು ಉಚ್ಚ ಶಿಕ್ಷಣ ಸಂಸ್ಥೆಗಳಾಗಿದ್ದವು. ಶಾಲೆ ಎಂಬ ಪದವನ್ನು ಬಾಲಶಿಕ್ಷೆಯ ಸಂಸ್ಥೆಗಳಿಗೂ, ಉಚ್ಚ ಶಿಕ್ಷಣ ಸಂಸ್ಥೆ ಗಳಿಗೂ ಕೂಡಿಯೇ ಬಳಿಸಲಾಗುತ್ತಿತ್ತು. ಈಗ ಮಠವೆಂದರೆ ಒಬ್ಬ ಗುರು ಅಥವಾ ಧಾರ್ಮಿಕ ಮುಖಂಡನು ವಾಸ ಮಾಡುವ ಸ್ಥಾನ ಅಥವಾ ಹಳ್ಳಿಯಲ್ಲಿಯ ಪ್ರಾಥಮಿಕ ಶಾಲೆಯೆಂದಾಗು ತ್ತದೆ. ಹಿಂದೆ ಮಠದಲ್ಲಿ ಉಚ್ಚಶಿಕ್ಷಣ ಮತ್ತು ಬಾಲಶಿಕ್ಷೆ

ಎರಡೂ ನಡೆಯುತ್ತಿದ್ದವು. ಆದರೂ ಉಚ್ಚ ಶಿಕ್ಷಣಕ್ಕೆ ಅವರಲ್ಲಿ
ಹೆಚ್ಚಿನ ಪ್ರಾಶಸ್ತ್ಯವಿತ್ತು. ಮಠದಲ್ಲಿ ಓದುತ್ತಿದ್ದ ವಿದ್ಯಾರ್ಥಿ
ಗಳಿಗೆ ಛತ್ರದಲ್ಲಿ ಊಟದ ವ್ಯವಸ್ಥೆ ಇರುತ್ತಿತ್ತು. (ವಿದ್ಯಾರ್ಥಿಗಳ
ಜೊತೆಗೆ ಅಲ್ಲಿ ಪ್ರವಾಸಿಗಳಿಗೂ ಊಟದ ವ್ಯವಸ್ಥೆ ಇರುತ್ತಿತ್ತು).
ಮಠ ಮತ್ತು ಸತ್ರ ಒಂದು ದೇವಸ್ಥಾನಕ್ಕೆ ಸೇರಿರುತ್ತಿದ್ದವು.
ಅಥವಾ ಮಠ ದೊಡ್ಡದಾಗಿದ್ದರೆ ಮಠದವರೇ ಒಂದು ದೇವ
ಸ್ಥಾನವನ್ನು ಕಟ್ಟಿಸುತ್ತಿದ್ದರು. ಇವೆಲ್ಲ ಒಂದು ಅಗ್ರಹಾರದಲ್ಲಿ
(ವಿದ್ವಾಂಸರು ನೆಲೆಸಿರುವ ಹಳ್ಳಿ) ಇರಬಹುದು ಅಥವಾ ಇತರ
ಹಳ್ಳಿಗಳಲ್ಲಿ ಇರಬಹುದು. ಅಥವಾ ಬ್ರಹ್ಮಪುರಿಯಲ್ಲಿ (ವಿದ್ವಾಂಸ
ರಿಗಾಗಿ ಬಿಟ್ಟ ಚಿಕ್ಕ ಪಟ್ಟಣ) ಇರಬಹುದು. ಯಾವದೇ
ಊರಿನಲ್ಲಿ ಮಠವಿಲ್ಲದಿದ್ದರೆ ದೇವಸ್ಥಾನದಲ್ಲಿಯೇ ಶಿಕ್ಷಣದ
ವ್ಯವಸ್ಥೆ ಇರುತ್ತಿತ್ತು. ಮಠ ಅಥವಾ ದೇವಸ್ಥಾನ ಬಹು ಪ್ರಸಿದ್ಧಿ
ಹೊಂದಿ ಅನೇಕ ವಿದ್ಯಾರ್ಥಿಗಳನ್ನು ಆಕರ್ಷಿಸಿದರೆ ಅದು ಒಂದು
ಘಟಿಕೆಯೂ ಆಗಬಹುದು. ಇವಲ್ಲದೇ ತಪೋವನಗಳೂ ಮತ್ತು
ಗುರುಗಳ ಮನೆಗಳೂ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು.

## ತಪೋವನಗಳು

ಉಪನಿಷತ್, ರಾಮಾಯಣ ಮತ್ತು ಮಹಾಭಾರತಗಳ
ಕಾಲದಲ್ಲಿದ್ದಷ್ಟು ಋಷಿಗಳ ತಪೋವನಗಳು ಮುಂದಿನ ಕಾಲದಲ್ಲಿ
ಕಂಡುಬರುವದಿಲ್ಲ. ಆದರೆ ಪೂರ್ಣ ಇಲ್ಲವೇ ಇಲ್ಲ ಎನ್ನುವ
ಹಾಗೂ ಇರಲಿಲ್ಲ. ಇವೂ ವಿದ್ಯಾ ಕೇಂದ್ರಗಳಿದ್ದುದರಿಂದ ಇವು-
ಗಳ ಬಗ್ಗೆ ವಿವರಿಸಿ ಹೇಳುವದು ಅವಶ್ಯ. ಶಾಸನಗಳಲ್ಲಿ ಬಹಳ
ಹೊಗಳಲ್ಪಟ್ಟ ಒಂದು ತಪೋವನವನ್ನು ನಾವಿಲ್ಲಿ ಉದಾಹರಿಸ-
ಬಹುದು. ಇದೇ ಕಾರ್ತಿಕೇಯ ತಪೋವನ. ಇದು ಇದ್ದದ್ದು

ಕುಡತಿನಿ ಮತ್ತು ಕೊಳಗಲ್ಲುಗಳಲ್ಲಿ (ಇವೆರಡೂ ಬಳ್ಳಾರಿಯ ಸಮೀಪದ ಅಕ್ಕಪಕ್ಕದ ಊರುಗಳು.) ಇವೆರಡೂ ಒಂದೇ ಆವರ್ತಕ್ಕೆ ಸೇರಿದ್ದವು. ಈ ತಪ್ರೋವನವನ್ನು ಸ್ಥಾಪಿಸಿದವನು ದಂಡಾಸನಿ ಗದಾಧರನೆನ್ನುವ ಯತಿ. ಈತನು ಬಂಗಾಲದಿಂದ ಕರ್ನಾಟಕಕ್ಕೆ ಬಂದು ಈ ಎರಡೂ ಊರುಗಳಲ್ಲಿ ಕಾರ್ತಿಕೇಯನ ದೇವಸ್ಥಾನಗಳನ್ನು ಕಟ್ಟಿಸಿದನು. ಈ ದೇವಸ್ಥಾನಗಳಲ್ಲಿಯೇ ಈತನ ಪ್ರೇರಣೆಯಿಂದ ಕೊಳಗಲ್ಲಿನಲ್ಲಿ ಒಂದು ಕೆರೆ, ಒಂದು ಮಠ ಮತ್ತು ವಿದ್ಯಾದಾನಕ್ಕೆ ಒಂದು ಸತ್ರ, ಇವಿಷ್ಟು ನಿರ್ಮಾಣವಾದವು. ರಾಷ್ಟ್ರಕೂಟರ ಕೊನೆಗಾಲದಲ್ಲಿ ಸ್ಥಾಪಿತವಾದ ಈ ತಪ್ರೋವನ, ಕಲ್ಯಾಣದ ಚಾಲುಕ್ಯರ ಮತ್ತು ಹೊಯಿಸಳರ ಕಾಲಗಳಲ್ಲಿ ಊರ್ಜಿತ ಸ್ಥಿತಿಯಲ್ಲಿತ್ತು. ಚಾಲುಕ್ಯರ ಕಾಲದಲ್ಲಿ ಗದಾಧರಯ್ಯನವರ ಸ್ಥಾನದಲ್ಲಿ ಯಶೋಧರ ಯತಿಗಳು ಇದ್ದರು. ಆ ಕಾಲದಲ್ಲಿ ಕುಡತಿನಿಯಲ್ಲಿ ಸರಸ್ವತಿ ಮತ್ತು ವಿನಾಯಕ ದೇವಸ್ಥಾನಗಳನ್ನೂ ಮತ್ತು ಬಹಳ ಸುಂದರವಾದ ಸಭಾ ಮಂಟಪವನ್ನೂ ಇಲ್ಲಿ ಕಟ್ಟಿದರು. ಈ ಎಲ್ಲಾ ಕಟ್ಟಡಗಳಿಂದ ಕಾರ್ತಿಕೇಯ ತಪ್ರೋವನವು ಒಂದು ಚಿಕ್ಕ ಪಟ್ಟಣವೇ ಆಯಿತು. ಆ ತಪ್ರೋವನವು ಇಂದ್ರನ ಅಮರಾವತಿಯನ್ನು ಮೀರಿಸುತ್ತಿತ್ತು. ಹೀಗೆ ಕ್ರಿ. ಶ. ೯೬೪ ರಲ್ಲಿ ತಪ್ರೋವನವಾಗಿ ಸ್ಥಾಪಿತವಾದ ಸ್ಥಾನ ಮುಂದೆ ೨೦೦ ವರ್ಷಗಳಲ್ಲಿ ದೊಡ್ಡ ನಗರವಾಗಿ ಬೆಳೆಯಿತು.' ಇದರ ಕೊನೆಯ ಉಲ್ಲೇಖ ೧೨೧೮-೧೯ ರಲ್ಲಿ ಸಿಗುತ್ತದೆ.

ಸೊಗಲದ ಸುವರ್ಣಾಕ್ಷಿ ತಪ್ರೋವನದ ವರ್ಣನೆ ಅತ್ಯಂತ ಮನೋಹರವಾಗಿದೆ. ಅದರಲ್ಲಿ ಹೇಳಿದ ಪ್ರಕಾರ ಹುಲಿಗಳು. ಮಿಸುಕಾಡದೆ ನಿಂತು ಧರ್ಮ ಶ್ರವಣ ಮಾಡುತ್ತಿದ್ದವಂತೆ. ಗಿಳಿ

ಗಳು, ಮುನಿಗಳು ಓದುವುದನ್ನು ಕೇಳಿ ಕೇಳಿ ಹಗಲೂ ರಾತ್ರಿ ಅವನ್ನೇ ಹಾಡುತ್ತಿದ್ದುವಂತೆ. ಈ ತಪೋವನವನ್ನು ಸ್ಥಾಪಿಸಿದವಳು ಕಂಚಿಕಬ್ಬೆ. ಈಕೆ ೫೦೦ ಕಮ್ಮ ಭೂಮಿಯನ್ನು ಇವರ ಸಲುವಾಗಿ ದಾನಮಾಡಿದಳು. ಇದರಿಂದ ಇಲ್ಲಿ ತಪಸ್ಸು ಮಾಡುತ್ತಿದ್ದ ಮುನಿಗಳಿಗೆ ಆಹಾರವನ್ನು ಒದಗಿಸಬೇಕಾಗಿತ್ತು.

## ಘಟಿಕೆ

ಉಚ್ಚಶಿಕ್ಷಣ ಸಂಸ್ಥೆಗಳಲ್ಲಿ ಘಟಿಕೆ ಅತ್ಯಂತ ಪ್ರಾಚೀನವಾದದ್ದು. ಅಲ್ಲಿಯ ಉಚ್ಚ ಶಿಕ್ಷಣ ಶಿಖರಪ್ರಾಯವಾಗಿತ್ತು. ಅನೇಕ ಶತಮಾನಗಳ ವರೆಗೆ ಕರ್ನಾಟಕದಲ್ಲಿ ಈ ಸಂಸ್ಥೆ ಬದುಕಿ ಬಾಳಿದ್ದರೂ ಇದೀಗ ಅದರ ಹೆಸರೇ ಕೇಳಬರುತ್ತಿಲ್ಲ.

ಇಷ್ಟು ಅಲ್ಲ. ಘಟಿಕೆಯ ಸಂಘಟನೆ, ಸ್ವರೂಪಗಳ ಬಗ್ಗೆ ಇನ್ನೂ ವಾದವಿವಾದಗಳಿವೆ ಕೆಲವು ಬಾರಿ ಅದನ್ನು ಸಭಾಗೃಹವೆಂದು ಕರೆಯುತ್ತಾರೆ. ಇನ್ನೂ ಕೆಲವರು ಅದನ್ನು ದೇವಸ್ಥಾನವೆಂದಿದ್ದಾರೆ. ಇನ್ನೂ ಕೆಲವರು ಅದನ್ನು ಬ್ರಹ್ಮಪುರಿಗೆ ಹೋಲಿಸುತ್ತಾರೆ. ಈ ಬೇರೆ ಬೇರೆ ಅಭಿಪ್ರಾಯಗಳು ತಪ್ಪಲ್ಲ. ಅದರಲ್ಲಿ ಒಂದು ಸಭಾಗೃಹವಿರುತ್ತಿತ್ತು. ಅದು ಒಂದು ದೇವಸ್ಥಾನಕ್ಕೆ ಹೊಂದಿ ಇರುತ್ತಿತ್ತು. ಬ್ರಹ್ಮಪುರಿ, ಅಗ್ರಹಾರಗಳಲ್ಲಿದ್ದ ಹಾಗೆ ಘಟಿಕೆಯಲ್ಲಿಯೂ ವಿದ್ವಾಂಸರು ಇರುತ್ತಿದ್ದರು.

ಕರ್ನಾಟಕದ ಘಟಿಕೆಗಳ ಬಗ್ಗೆ ಹೇಳುವ ಮೊದಲು ಕಂಚಿಯ ಘಟಿಕೆಯ ಬಗ್ಗೆ ಒಂದೆರಡು ಮಾತು ಹೇಳಬಹುದು. ಏಕೆಂದರೆ ದಕ್ಷಿಣ ಭಾರತದಲ್ಲಿ ಅದು ಮೊದಲನೆಯ ಉಚ್ಚ ಶಿಕ್ಷಣ ಕೇಂದ್ರವಾಗಿತ್ತು. ಮತ್ತು ಕರ್ನಾಟಕ ಆಂಧ್ರಗಳ ಘಟಿಕೆಗಳಿಗೆ

ಅನು ಮಾದರಿ ಅಥವಾ ಮಾತೃಸ್ವರೂಪವಾಗಿತ್ತು. ಕರ್ನಾಟಕ ದಲ್ಲಿ ೪ನೇ ಶತಮಾನದಲ್ಲಿ ಉಚ್ಚ ಶಿಕ್ಷಣ ಕೇಂದ್ರಗಳಿರಲಿಲ್ಲ ವೆಂದೆನಿಸುತ್ತದೆ. ಕದಂಬರ ಮಯೂರಶರ್ಮನು ( ಕ್ರಿ. ಶ. ೩೪೫-೩೬೦ ) ತನ್ನ ಗುರು ವೀರಶರ್ಮನಿಂದ ಕಲಿಯುವದೆಲ್ಲ ಮುಗಿದ ಮೇಲೆ ಕಂಚಿಯ ಘಟಿಕೆಗೆ ಎಲ್ಲಾ ಪವಿತ್ರ ಗ್ರಂಥಗ ಳನ್ನು(ನಿಖಿಲ ಪ್ರವಚನಂ)ಅಭ್ಯಸಿಸುವದಕ್ಕೆ ಹೋದದ್ದು ಮತ್ತು ಈ ಉದ್ದೇಶವು ಹೇಗೆ ವಿಫಲವಾಯಿತು ಎನ್ನುವದನ್ನು ನಾವು ಈ ಮೊದಲೇ ತಾಳಗುಂದದ ಶಾಸನದಲ್ಲಿ ಬರೆದಿರುವದನ್ನು ನೋಡಿದ್ದೇವೆ. ಈ ಘಟಿಕೆಯು ಒಂದು ದೇವಸ್ಥಾನದಲ್ಲಿ ಇತ್ತೆಂದೂ ಅದನ್ನು ಪವಿತ್ರವೆಂದು ಗಣಿಸುತ್ತಿದ್ದರೆಂದೂ ಇನ್ನೊಂದು ಶಾಸನದಿಂದ ತಿಳಿದುಬರುತ್ತದೆ.

ಕಾಡಿಯೂರು ( ಈಗಿನ ಕಳಸ, ಧಾರವಾಡ ಜಿಲ್ಲೆ ) ನಾಗಾಯಿ ( ಗುಲಬರ್ಗಾ ಜಿಲ್ಲೆ ) ಹೆಂಜೇರು (ಅನಂತಪುರ ಜಿಲ್ಲೆ) ಹೊಟ್ಟೂರು (ಧಾರವಾಡ ಜಿಲ್ಲೆ) ಮೋರಿಗೆರೆ (ಬಳ್ಳಾರಿ ಜಿಲ್ಲೆ) ಮತ್ತು ರಾಯಬಾಗ (ಬೆಳಗಾಂವ ಜಿಲ್ಲೆ) ಉಮಚಗಿ (ಧಾರವಾಡ ಜಿಲ್ಲೆ) ಕಡಲೆವಾಡ (ಬಿಜಾಪುರ ಜಿಲ್ಲೆ) ಗಳಲ್ಲಿ ಘಟಿಕೆಗಳು ಇದ್ದವು. ಇವುಗಳನ್ನು ಉಲ್ಲೇಖಿಸುವ ಶಾಸನ ಗಳಿಂದ ಈ ಸಂಸ್ಥೆಯ ಕೆಲವು ವೈಶಿಷ್ಟ್ಯಗಳನ್ನು ನಾವು ತಿಳಿದು ಕೊಳ್ಳಬಹುದಾಗಿದೆ. ಮೊದಲನೆಯದಾಗಿ ಈ ಘಟಿಕೆಯಲ್ಲಿ ಎಲ್ಲ ಕಾರ್ಯಕ್ರಮಗಳು ವೇಳೆಗೆ ಸರಿಯಾಗಿ ನಡೆಯುತ್ತಿದ್ದವು. ವೇಳಾಪತ್ರಿಕೆಯಂತೆ ಕೆಲಸ ಕಾರ್ಯಗಳು ನಡೆಯುತ್ತವೆಯೋ ಎಂದು ನೋಡಲಿಕ್ಕೆ ಮೇಲಧಿಕಾರಿಗಳಿದ್ದರು. ಇವರಿಗೆ ಘಟಿಕಾ ಪ್ರಹಾರಿಗಳೆಂದೂ ಕಾಪಿನ ಘಟಿಯಾರರೆಂದೂ ಹೆಸರು ಇತ್ತು.

ಬಹುಶಃ ಇವರ ಕೈ ಕೆಳಗಿನ ಆ ಹುಡುಗರಿಗೆ ಘಳಿಗೆಯ ಮಾಣಿ ಗಳೆನ್ನುತ್ತಿದ್ದರು. ಈ ಸಂಸ್ಥೆಗಳನ್ನು ಘಳಿಗೆಯ ಪ್ರಕಾರ ನಡೆಸು-ತ್ತಿದ್ದುದರಿಂದ ಇವಕ್ಕೆ ಘಳಿಗೆಯೆಂದು ಹೆಸರು ಬಂದಿರಬಹುದೋ ಏನೋ !

ಎರಡನೆಯದಾಗಿ ಘಳಿಗೆಗಳಲ್ಲಿ ವಿದ್ಯಾರ್ಥಿಗಳು ಹೆಚ್ಚಾಗಿ ರುತ್ತಿದ್ದರು. ನಾಗಾಯಿಯ ಘಟಿಕೆಯ ಮೂರು ಭಾಗಗಳಲ್ಲಿ ಸುಮಾರು ೧,೦೦೦ ವಿದ್ಯಾರ್ಥಿಗಳಿದ್ದರು.

ಮೂರನೆಯದಾಗಿ ಘಟಿಕೆಗಳಲ್ಲಿ ಚರ್ಚೆಗಳು ನಡೆಯು-ತ್ತಿದ್ದವು. ಅವುಗಳಲ್ಲಿ ಗೆದ್ದವರಿಗೆ ಘಟಿಕಾವಾದಿಗಳೆಂಬ ಬಿರುದನ್ನು ಕೊಡಲಾಗುತ್ತಿತ್ತು.

ಕೊನೆಯದಾಗಿ ಘಟಿಕೆಯಲ್ಲಿ ಅಭ್ಯಾಸ ಮಾಡಿದನಂತರ ಪರೀಕ್ಷೆ ನಡೆಯುತ್ತಿತ್ತು. ಒಂದೊಂದು ವೇದಕ್ಕೆ ಒಂದೊಂದು ಘಟವನ್ನು ಇಟ್ಟಿರುತ್ತಿದ್ದರು. ಈ ಘಟ ಅಥವಾ ಮಡಕೆ-ಗಳಲ್ಲಿ ಆಯಾ ವೇದಗಳ ಸೂಕ್ತಗಳ ಮೊದಲನೆ ಭಾಗವನ್ನು ಬರೆದಿರುತ್ತಿದ್ದರು. ಪರೀಕ್ಷಾರ್ಥಿಗಳು ತಮಗೆ ಸಂಬಂಧಪಟ್ಟ ಮಡಕೆಗಳಿಂದ ಚೀಟಿಯನ್ನು ತೆಗೆದು ಅದರಲ್ಲಿ ಸೂಚಿಸಿದ ಶ್ಲೋಕಗಳನ್ನು ಹೇಳಬೇಕಾಗಿತ್ತು. ( ಈ ಸಂಸ್ಥೆಗೆ ಘಟಿಕೆ ಯೆಂದು ಹೆಸರು ಬರುವದಕ್ಕೆ ಅವರ ಪರೀಕ್ಷೆಗಳಲ್ಲಿ ಘಟವನ್ನು ಉಪಯೋಗಿಸುತ್ತಿದ್ದುದೇ ಕಾರಣವಾಗಿರಬಹುದು. ) ಈ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಬಹುಶಃ ಘಟಿಕ ಸಾಹಸ ರೆನ್ನುವ ಬಿರುದನ್ನು ಕೊಡುತ್ತಿದ್ದರು. ಈ ಹೆಸರೇ ಘಳಸಾಸ, ಘಳಿಸ ಆಗಿ ಮುಂದೆ ಘೈಸಾಸವೆಂದಾಗಿರಬೇಕು. (ಮಹಾರಾಷ್ಟ್ರ ದಲ್ಲಿ ಬ್ರಾಹ್ಮಣರಲ್ಲಿ ಈ ಅಡ್ಡ ಹೆಸರು ಸಾಮಾನ್ಯವಾಗಿದೆ.)

ಘಟಿಕೆಯ ಆಂತರಿಕ ವ್ಯವಸ್ಥೆಯ ಬಗ್ಗೆ ನಾಗಾಯಿಯ ಉದಾಹರಣೆಯನ್ನು ನಾವು ತೆಗೆದುಕೊಳ್ಳಬಹುದು. ಈ ಊರಲ್ಲಿಯ ಒಂದು ವಿದ್ಯಾಕೇಂದ್ರಕ್ಕೆ "ಘಟಿಕಾಸ್ಥಾನವೆನಿಪ ಶಾಲೆ"ಯೆಂದು ಕರೆದಿದ್ದಾರೆ. ಇದರಲ್ಲಿ ೨೦೦ ವಿದ್ಯಾರ್ಥಿಗಳು ವೇದಾಧ್ಯಯನವನ್ನೂ, ೫೨ ವಿದ್ಯಾರ್ಥಿಗಳು ಶಾಸ್ತ್ರವನ್ನೂ ಅಭ್ಯಸಿಸುತ್ತಿದ್ದರು. ವೇದಗಳನ್ನು ಕಲಿಸಲಿಕ್ಕೆ ಮೂವರು ಶಾಸ್ತ್ರಗಳನ್ನು ಕಲಿಸಲಿಕ್ಕೆ ಮೂವರು ಉಪಾಧ್ಯಾಯರು ಇರುತ್ತಿದ್ದರು. ಶಾಸ್ತ್ರಗಳ ಉಪಾಧ್ಯಾಯರಲ್ಲಿ ಒಬ್ಬರು ಭಟ್ಟದರ್ಶನ, ಇನ್ನೊಬ್ಬರು ನ್ಯಾಸವೆಂಬ ವ್ಯಾಕರಣ ಗ್ರಂಥ ಮತ್ತು ಮೂರನೆಯವರು ಪ್ರಭಾಕರವೆನ್ನುವ ಮೀಮಾಂಸಾ ಗ್ರಂಥವನ್ನು ಕಲಿಸುತ್ತಿದ್ದರು. ೬ ಜನ ಸರಸ್ವತಿ ಭಂಡಾರಿಗರು (ಗ್ರಂಥ ಭಂಡಾರಿಗಳು) ಪುಸ್ತಕ ಸಂಗ್ರಹಾಲಯದ ವ್ಯವಸ್ಥೆಯನ್ನು ನೋಡುತ್ತಿದ್ದರು. ಒಬ್ಬ ಘಟಿಕಾಪ್ರಹಾರಿ ವೇಳಾಪತ್ರಿಕೆಯ ಪ್ರಕಾರ ಕಾರ್ಯಕ್ರಮಗಳ ನಿರ್ವಹಣೆಯನ್ನು ನೋಡುತ್ತಿದ್ದನು. ಈ ಸಂಸ್ಥೆಯನ್ನು ಮತ್ತು ಇದಕ್ಕೆ ಸಂಬಂಧಪಟ್ಟ ದೇವಸ್ಥಾನವನ್ನು ನಡೆಸುವದಕ್ಕೆ ಕೆಳಗಿನ ಪ್ರಕಾರ ದತ್ತಿಯನ್ನು ಕೊಟ್ಟಿದ್ದರು.

| ಭೂಮಿ | ಉದ್ದೇಶ |
|---|---|
| ೩೫ ಮತ್ತರು | ಭಟ್ಟದರ್ಶನ ಉಪಾಧ್ಯಾಯರಿಗೆ |
| ೩೦ ಮತ್ತರು | ನ್ಯಾಸದ ಉಪಾಧ್ಯಾಯರಿಗೆ |
| ೪೫ ಮತ್ತರು | ಪ್ರಭಾಕರದ ಉಪಾಧ್ಯಾಯರಿಗೆ |
| ೩೦ ಮತ್ತರು | ಪ್ರತ್ಯೇಕ ಸರಸ್ವತೀ ಭಂಡಾರಿಗರಿಗೆ |
| ೩೦ ಮತ್ತರು | ಘಟಿಕಾ ಪ್ರಹಾರಿಗೆ |

೧,೦೦೦ ಮತ್ತರು — ೫೦೦ ವಿದ್ಯಾರ್ಥಿಗಳ ಅಶನ, ವಸ್ತ್ರ ಇ. ಮತ್ತು ಘಟಿಕೆಗೆ ಸಂಬಂಧಿಸಿದ ದೇವಸ್ಥಾನದ ಉತ್ಸವ ಮತ್ತು ನಿತ್ಯಸೇವೆ.

ಒಂದಾನೊಂದು ಕಾಲದಲ್ಲಿ ಕರ್ನಾಟಕವು ಇಂಥ ಘಟಿಕಾ ಸ್ಥಾನಗಳಿಗೆ ಪ್ರಸಿದ್ಧವಾಗಿತ್ತು. ಈಗ ಅದರ ಹೆಸರೇ ಕೇಳಿ ಬರುತ್ತಿಲ್ಲ. ಆದರೆ ಈಗಲೂ ಬಳಕೆಯಲ್ಲಿರುವ ಗಟ್ಟಿಗ ಅಥವಾ ಘಟ್ಟಿಗ, ಘಟಾನುಘಟಿ, ಘಟಿಕೋತ್ಸವ, ಘಳಿಗೆ ಮೊದಲಾದ ಪದಗಳಿಂದ ಈ ಸಂಸ್ಥೆಯ ಹಿರಿಮೆಯನ್ನು ಸ್ವಲ್ಪ ಜ್ಞಾಪಿಸಿ ಕೊಳ್ಳಬಹುದಾಗಿದೆ.

## ಅಗ್ರಹಾರಗಳು

ಅಗ್ರಹಾರಗಳು ನಮಗೆ ಘಟಿಕೆಗಳಿಗಿಂತ ಹೆಚ್ಚು ಪರಿ ಚಿತವಾದವುಗಳು. ಈಗ ಅಗ್ರಹಾರವೆಂದರೆ ಸಾಮಾನ್ಯವಾಗಿ ಪಟ್ಟಣದಲ್ಲಿಯ ಬ್ರಾಹ್ಮಣರ ವಸತಿ ಅಥವಾ ಸಾಲುಮನೆಗಳು. ಆದರೆ ಹಿಂದಕ್ಕೆ ಅಗ್ರಹಾರವೆಂದರೆ ವಿದ್ಯಾಕೇಂದ್ರವಿರುವ ಒಂದು ಹಳ್ಳಿಯಾಗಿತ್ತು.

ಅಗ್ರಹಾರಗಳನ್ನು ವಿದ್ವಾಂಸರಾದ ಬ್ರಾಹ್ಮಣರಿಗೆ ಕೊಡ ಮಾಡುತ್ತಿದ್ದರು. ಅವರು ವೇದಾಧ್ಯಯನದಲ್ಲಿ ನಿರತರಾಗಿರು- ತ್ತಿದ್ದರಲ್ಲದೇ ಷಟ್‌ಕರ್ಮಗಳಲ್ಲಿ ತೊಡಗಿರುತ್ತಿದ್ದರು. ಪಾಠ ಹೇಳಿಕೊಡುವದು ಈ ಷಟ್‌ಕರ್ಮಗಳಲ್ಲಿ ಒಂದಾಗಿತ್ತು. ಕುಪ್ಪಟೂರಿನ ಅಗ್ರಹಾರದ ವಿದ್ವಾಂಸರು ವಿದ್ಯಾರ್ಥಿಗಳಾಗಿ

ಬಂದವರಿಗೆಲ್ಲರಿಗೂ ಶಾಸ್ತ್ರಗಳನ್ನು ಸಂತೋಷದಿಂದ ಬೋಧಿಸು-ತ್ತಿದ್ದರೆಂದು ಅಲ್ಲಿಯ ಒಂದು ಶಾಸನವು ಸ್ಪಷ್ಟವಾಗಿ ಹೇಳು ತ್ತದೆ.

ತಾಳಗುಂದ ಅಥವಾ ಸ್ಥಾನಕುಂದೂರು ಕರ್ನಾಟಕ ದಲ್ಲಿಯ ಮೊದಲನೇ ಅಗ್ರಹಾರ. ಅದು ಸ್ಥಾಪನೆ-ಯಾದ ರೀತಿಯನ್ನು ಒಂದು ಶಾಸನದಲ್ಲಿ ಹೀಗೆ ಹೇಳಿದೆ. ಮಯೂರ ವರ್ಮ (ಶರ್ಮ) ನ ಪೂರ್ವಜನಾದ ಮುಕ್ಕಣ್ಣ ಕದಂಬನು ಈ ಅಗ್ರಹಾರವನ್ನು ಸ್ಥಾಪಿಸುವಾಗ ದಕ್ಷಿಣ ದೇಶ ದಲ್ಲಿ ಯೋಗ್ಯ ಬ್ರಾಹ್ಮಣರು ಸಿಗದೇ ಇದ್ದುದರಿಂದ, ಉತ್ತರ ಭಾರತದ ಅಹಿಚ್ಛತ್ರ ಅಗ್ರಹಾರದಿಂದ ೩೨ ಮನೆತನಗಳನು ಕರೆತಂದು ಇಲ್ಲಿಯೇ ನೆಲೆಸುವಂತೆ ಕೇಳಿಕೊಂಡನು. ಮುಂದೆ ಮಯೂರಶರ್ಮನು ಈ ಅಗ್ರಹಾರಕ್ಕೆ ೧೪೪ ಹಳ್ಳಿಗಳನ್ನು ದಾನಮಾಡಿದನಂತೆ. ಈ ಅಗ್ರಹಾರದ ಬ್ರಾಹ್ಮಣರು ವೇದ, ವೇದಾಂಗ, ಮೀಮಾಂಸೆ, ಷಟ್ ತರ್ಕಗಳು, ಸ್ಮೃತಿ, ಪುರಾಣ ಮತ್ತು ನಾಟಕಗಳಲ್ಲಿ ಪರಿಣಿತರಾಗಿದ್ದರೆಂದು ೧೧೯೧ರ ಶಾಸನ ವೊಂದು ಹೇಳುತ್ತದೆ.

ಕದಂಬರ ಕಾಲದಲ್ಲಿ ತಾಳಗುಂದಕ್ಕೆ ಇದ್ದ ಸ್ಥಾನ (ಅಂದರೆ ಮುಖ್ಯ ಅಗ್ರಹಾರ) ಬಾದಾಮಿಯ ಚಾಲುಕ್ಯರ ಕಾಲ ದಲ್ಲಿ ಬಾದಾಮಿಗೆ ಇತ್ತು. ಶಾಸನಗಳಲ್ಲಿ ಅದನ್ನು ಅಗ್ರಹಾರ ವೆಂದು ಕರೆಯದಿದ್ದರೂ ಅದರ ವರ್ಣನೆಯಿಂದ ಅದಕ್ಕೂ ಅಗ್ರ ಹಾರಕ್ಕೂ ಹೆಚ್ಚಿನ ವ್ಯತ್ಯಾಸವಿರಲಿಲ್ಲವೆಂದು ಹೇಳಬಹುದು. ಕ್ರಿ. ಶ. ೬೯೯ರ ಒಂದು ಶಾಸನವು ಬಾದಾಮಿಯು ಒಂದು ಅಧಿಷ್ಠಾನವೆಂದು ಹೇಳಿ ಅಲ್ಲಿ ಅನೇಕ ಸಹಸ್ರ ದ್ವಿಜರು ಇದ್ದ

ಆವರು ಹದಿನಾಲ್ಕು ವಿದ್ಯೆಗಳನ್ನು ಬಲ್ಲವರಾಗಿದ್ದರು ಎಂದು ಹೇಳುತ್ತದೆ. ೮ನೇ ಶತಮಾನದ ಇನ್ನೊಂದು ಶಾಸನವು ಬಾದಾಮಿಯಲ್ಲಿ ವೇದಗಳನ್ನು ಬಲ್ಲ ೨,೦೦೦ ವಿದ್ವಾಂಸರಿದ್ದರು ಎಂದು ಹೇಳುತ್ತದೆ.

ಇದೇ ಕಾಲದಲ್ಲಿ (೬ರಿಂದ ೮ನೇ ಶತಮಾನ) ಮತ್ತು ಅನಂತರವೂ ಐಹೊಳೆಯು ವಿದ್ಯಾಕೇಂದ್ರವಾಗಿತ್ತು. ಕ್ರಿ. ಶ. ಸುಮಾರು ೮ನೇ ಶತಮಾನದ ಶಾಸನವು ಐಹೊಳೆಯಲ್ಲಿ (ಆರ್ಯಪುರ) ೫೦೦ ಜನ ಚತುರ್ವೇದಿ ಸಮುದಾಯಗಳಿದ್ದರೆಂದು ಹೇಳುತ್ತದೆ. ೧೧೧೯ರ ಇನ್ನೊಂದು ಶಾಸನವು ಆ ಊರನ್ನು ಒಂದು ಅಗ್ರಹಾರವೆಂದೂ ಮತ್ತು ಅದರಲ್ಲಿ ೫೦೦ ವಿದ್ವಾಂಸರಿದ್ದರೆಂದೂ ತಿಳಿಸುತ್ತದೆ.

ರಾಷ್ಟ್ರಕೂಟರ ಕಾಲಕ್ಕೆ ನಾವು ಬಂದರೆ ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧವಾದ ಅಗ್ರಹಾರವೆಂದರೆ ವಿಜಾಪುರ ಜಿಲ್ಲೆಯ ಸಾಲೋಟಗಿಯಾಗಿತ್ತು. ಕ್ರಿ. ಶ. ಸುಮಾರು ೯೪೫ರಲ್ಲಿ ಮೂರನೇ ಕೃಷ್ಣರಾಜನ ಮುಖ್ಯ ಮಂತ್ರಿಯಾದ ನಾರಾಯಣನು ಅಲ್ಲಿಯ ತ್ರೈಪುರುಷದೇವರಿಗೆ ಒಂದು ಸುಂದರವಾದ ದೇವಸ್ಥಾನವನ್ನು ಕಟ್ಟಿಸಿದನು. ಅದರ ಸೌಂದರ್ಯವನ್ನು ನೋಡಿ ಬ್ರಹ್ಮ ವಿಷ್ಣು ಮಹೇಶ್ವರರು ತಂತಮ್ಮ ಸ್ಥಾನಗಳನ್ನು ಬಿಟ್ಟು ಬಂದು ಅಲ್ಲಿ ನೆಲೆಸಿದರಂತೆ! ಈ ದೇವಸ್ಥಾನದ ಆವಾರದಲ್ಲಿದ್ದ ಶಾಲೆಯ ವಿದ್ಯಾರ್ಥಿಗಳು ಬೇರೆ ಬೇರೆ ಜನಪದ (ನಾಡು ?) ಗಳಿಂದ ಬಂದವರಿದ್ದರು (ತತ್ರಸಂತಿ ನಾನಾ ಜನಪದೋದವಃ). ಸಾಲೋಟಗಿ ಊರಿನ ಒಡೆಯ ಚಕ್ರಾಯುಧ ಬುಧನು ಮತ್ತು ಆ ಅಗ್ರಹಾರದ ೨೦೦ ಮಹಾಜನರು

ವಿದ್ಯಾರ್ಥಿಸಂಘದ ಊಟ ಉಪಚಾರಕ್ಕೆ ೫೦೦ ನಿವರ್ತನ ಅಳತೆಯುಳ್ಳ ಭೂಮಿಯನ್ನು ದಾನ ಮಾಡಿದರು. ನಾಗಾಯಿಯಲ್ಲಿ ಸುಮಾರು ೨೫೦ ಜನರ ಮತ್ತು ದೇವಸ್ಥಾನದ ಖರ್ಚಿಗೆ ೧೦೦೦ ಮತ್ತರು ಭೂಮಿಯನ್ನು ದಾನ ಮಾಡಿದ್ದರೆ, ಸಾಲೋಟಗಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಅಂಥದೆ ಉದ್ದೇಶಕ್ಕೆ ೫೦೦ ನಿವರ್ತನ ಕೊಟ್ಟಿರುವದರಿಂದ ಈ ಅಗ್ರಹಾರದಲ್ಲಿ ೧೨೫ ವಿದ್ಯಾರ್ಥಿಗಳಿದ್ದರೆಂದು ಊಹಿಸಬಹುದು. ಈ ವಿದ್ಯಾರ್ಥಿಗಳ ವಾಸಕ್ಕೆ ೨೭ ಮನೆಗಳನ್ನು ಕಟ್ಟಿಸಿ ಅಲ್ಲಿ ಎಲ್ಲ ಬಗೆಯ ಸೌಕರಗಳನ್ನು ನಿರ್ಮಿಸಲಾಗಿತ್ತು. ಅದರ ತೋಟಕ್ಕೆ ೪ ನಿವರ್ತನ ಭೂಮಿಯನ್ನೂ, ದೀಪಗಳ ಖರ್ಚಿಗೆ ೧೨ ನಿವರ್ತನ ಭೂಮಿಯನ್ನೂ ಕೊಡಲಾಗಿತ್ತು. ಈ ಭೂಮಿಗೆಲ್ಲ ಕಂದಾಯವನ್ನು ವಜಾ ಮಾಡಲಾಗಿತ್ತು. ಅಗ್ರಹಾರದಲ್ಲಿ ಚೌಲ, ಉಪನಯನ, ಮದುವೆಗಳು ನಡೆದರೆ ವಿದ್ಯಾರ್ಥಿಗಳಿಗೆ ಊಟಕ್ಕೆ ಔತಣ ನೀಡಬೇಕಾಗುತ್ತಿತ್ತು. ಈ ಸಮಾರಂಭಗಳಲ್ಲಿ ಅವರಿಗೆ ಕೊಡಬೇಕಾದ ದಕ್ಷಿಣೆಯನ್ನೂ ನಿರ್ದಿಷ್ಟಪಡಿಸಲಾಗಿತ್ತು. ಶಾಲೆಯ ಆವಾರದಲ್ಲಿ ಇರುತ್ತಿದ್ದ ಉಪಾಧ್ಯಾಯನಿಗೆ ಒಂದು ಮನೆಯನ್ನೂ, ಕರದಿಂದ ಮುಕ್ತವಾದ ೫೦ ನಿವರ್ತನ ಭೂಮಿಯನ್ನೂ ದಾನ ಮಾಡಿದ್ದರು. ಈ ಸೊಗಸಾದ ಸಾಲೆಯು ೨೦೦-೩೦೦ ವರ್ಷಗಳ ವರೆಗೆ ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದಿತು. ಈಗ ಇದರ ಕಟ್ಟಡದ ಅವಶೇಷಗಳು ಕೂಡ ಕಾಣದಿರುವದು ಶೋಚನೀಯವಾಗಿದೆ.

ಕಲ್ಯಾಣದ ಚಾಲುಕ್ಯರ ಆಳಿಕೆಯ ಆರಂಭದಲ್ಲಿ ಗದುಗಿನ ಹತ್ತಿರ ಇರುವ ಕೋಟಬುಮಚಿಗೆಯಲ್ಲಿ ಅಗ್ರಹಾರವು ಆರಂಭ

ವಾಯಿತು. ಈ ಅಗ್ರಹಾರದಲ್ಲಿ ಒಂದು ಘಟಿಕೆಯೂ ಇತ್ತು. ಆ ಸಾಲೆಯಲ್ಲಿ ಕಲಿಸುತ್ತಿದ್ದ ಭಟ್ಟನಿಗೆ ೫೦ ಮತ್ತರು ಭೂಮಿ ಮತ್ತು ಒಂದು ನಿವೇಶನವನ್ನು ಕೊಟ್ಟಿದ್ದರು. ಅವನು ನ್ಯಾಸ ಮತ್ತು ಪ್ರಭಾಕರ ಗ್ರಂಥಗಳನ್ನು ಕಲಿಸುತ್ತಿದ್ದನು. ಆತನ ವಿದ್ಯಾರ್ಥಿಗಳ ಜೀವನೋಪಾಯದ ಸಲುವಾಗಿ (ಊಟ ಮತ್ತು ಇತರ ಖರ್ಚಿಗೆ) ೨೫ ಮತ್ತರು ಭೂಮಿಯನ್ನು ಕೊಟ್ಟಿದ್ದರು. ಅಕ್ಕರಿಗನೆಂದು ಕರೆಯಲ್ಪಡುತ್ತಿದ್ದ ಇನ್ನೊಬ್ಬ ಉಪಾಧ್ಯಾಯನು ಗಣಿತ, ಜ್ಯೋತಿಷ, ಛಂದಸ್ಸು, ಅಲಂಕಾರ ಕಲಿಸುವದಲ್ಲದೇ ಅವುಗಳ ಮೇಲೆ ಪುಸ್ತಕಗಳನ್ನೂ ಬರೆಯಬಲ್ಲವನಾಗಿದ್ದನು. ಜೊತೆಗೆ ವ್ಯಾಕರಣದಲ್ಲಿಯೂ ತಜ್ಞನಾಗಿದ್ದನು. ಈತನಿಗೆ ೨೫ ಮತ್ತರು ಭೂಮಿಯನ್ನು ಕೊಟ್ಟಿದ್ದರು. ಇದರ ವರಮಾನ ದಿಂದ ಆತನು ತನ್ನ ವಿದ್ಯಾರ್ಥಿಗಳಿಗೆ ಒಂದು ಹೊತ್ತು ಊಟಕ್ಕೆ ಹಾಕಬೇಕಾಗಿತ್ತಲ್ಲದೇ ವರ್ಷಕ್ಕೊಂದು ಸಲ ಅವರಿಗೆ ಬಟ್ಟೆ ಯನ್ನು ಕೊಡಬೇಕಾಗಿತ್ತು. ಹೀಗೆ ಆತನಿಗೆ "ಭಟ್ಟ"ನಿಗಿಂತ ಕಡಿಮೆ ಭೂಮಿಯಿದ್ದು ಅದರಲ್ಲಿಯೇ ಆತನು ವಿದ್ಯಾರ್ಥಿಗಳ ಸಲುವಾಗಿಯೂ ಖರ್ಚು ಮಾಡಬೇಕಾಗಿತ್ತು. 'ಭಟ್ಟ'ನ ವಿದ್ಯಾರ್ಥಿಗಳಿಗೆ ಅಶನಾಚ್ಛಾದನಕ್ಕೆ ಭೂಮಿಯನ್ನು ಕೊಟ್ಟಿ ದ್ದರು. ಆದ್ದರಿಂದ ಈತನು ಭಟ್ಟನಿಗಿಂತ ಕಡಿಮೆ ದರ್ಜೆಯ ಉಪಾಧ್ಯಾಯನಿರಬೇಕೆಂದು ಊಹಿಸಲಾಗಿದೆ. ಆದರೆ ಅವನು ಕಲಿಸುತ್ತಿದ್ದ ವಿಷಯಗಳನ್ನು ನೋಡಿದರೆ ಮತ್ತು ಅವನ ಪಾಂಡಿತ್ಯವನ್ನು ನೋಡಿದರೆ ಈ ವ್ಯವಸ್ಥೆಗೆ ಬೇರೆ ಏನಾ ದರೂ ಕಾರಣವಿರಬೇಕೆಂದು ಶಂಕೆಗೆ ಆಸ್ಪದವಾಗುತ್ತದೆ.

ಕರ್ನಾಟಕದಲ್ಲಿ ಅನೇಕ ಅಗ್ರಹಾರಗಳ ಬಗ್ಗೆ ಬರೆಯ ಬಹುದು. ಹುಬ್ಬಳ್ಳಿಯಿಂದ ಹೊರಟರೆ ಹಾವೇರಿಯ ವರೆಗೂ

ಈಗಿನ ಒಂದೊಂದು ರೇಲ್ವೆಸ್ಟೇಶನ್ ಹಿಂದೆ ಒಂದೊಂದು ಅಗ್ರಹಾರವಾಗಿತ್ತು. ಕುಂದಗೋಳ ( ಈ ರೇಲ್ವೆ ಸ್ಟೇಶನ್ನಿನಿಂದ ಹುಬ್ಬಳ್ಳಿಯು ದಿಕ್ಕಿನಲ್ಲಿ ೧ ಮೈಲಿ ದೂರದಲ್ಲಿ ಈ ಅಗ್ರಹಾರವಿತ್ತೆಂದು ಈಗಲೂ ಅಲ್ಲಿಯವರು ಹೇಳುತ್ತಾರೆ), ಸಾಂವಶಿ, ಗುಡಗೇರಿ, ಎಲವಿಗಿ ಹತ್ತಿರ ಕಾಡಿಯೂರು ( ಈಗಿನ ಕಳಸ ) ಅದರ ಹತ್ತಿರದ ಹೊಟ್ಟೂರು, ಸವಣೂರು, ಅದರ ಸ್ಟೇಶನ್ನಿನ ಹತ್ತಿರವಿರುವ ಹತ್ತಿಮತ್ತೂರು, ಗದಗಿನ ಸುತ್ತಮುತ್ತಲೂ ಲಕ್ಕುಂಡಿ, ಇಟ್ಟಗಿ, ಕುಕ್ಕನೂರು, ಮಾಳದ ಆಲೂರು, ರೋಣ, ಸೂಡಿ ( ಇಲ್ಲಿ ಮಠ, ಬ್ರಹ್ಮಪುರಿಗಳೂ ಇದ್ದವು ), ಲಕ್ಷ್ಮೇಶ್ವರ (ಹಿಂದಿನ ಪುಲಿಗೆರೆ ಅಗ್ರಹಾರ,ಘಟಿಕೆ, ಬ್ರಹ್ಮಪುರಿ ಎಲ್ಲಾ ಇದ್ದ ಸ್ಥಳ). ಬನವಾಸಿ ಮಂಡಳವಂತೂ ವಿದ್ಯಾಕೇಂದ್ರಗಳಿಗೆ ಅದ್ವಿತೀಯವಾಗಿತ್ತು. ಬನವಾಸಿ, ಬಳ್ಳಿಗಾವೆ, ತಾಳಗುಂದಗಳಂತೂ ಅತಿ ಪ್ರಸಿದ್ಧವಿದ್ದವು. ಜಂಬೂರು, ಬೇಗೂರು, ಈಸೂರು, ಕಜೇ-ನಂದಿಹಳ್ಳಿ, ಸಾಲೂರು ( ಸಾಲೆಯಿದ್ದ ಊರು) ಇವು ಅಗ್ರಹಾರಗಳಿದ್ದು ವಿದ್ಯಾಸ್ಥಾನಗಳಾಗಿದ್ದವು. ಹೀಗೆ ಕರ್ನಾಟಕದ ಅನೇಕ ಕಡೆಗೆ ೧೧, ೧೨ನೇ ಶತಮಾನಗಳಲ್ಲಿ ವಿದ್ಯಾಸಂಸ್ಥೆಗಳು ಊರ್ಜಿತಾವಸ್ಥೆಯಲ್ಲಿದ್ದವು.ಅಗ್ರಹಾರಗಳಂತೂ ಹೇರಳವಾಗಿದ್ದರಿಂದ ಅವುಗಳ ಯಾದಿ ಮಾಡುವದೂ ಪ್ರಯಾಸದಕೆಲಸವಾಗಿದೆ.

ಈ ಅಗ್ರಹಾರಗಳು ಹೇಗೆ ಸ್ಥಾಪನೆಯಾಗುತ್ತಿದ್ದವು? ದೇಗಾಂವೆ ಅಗ್ರಹಾರದ ಸ್ಥಾಪನೆಯ ವಿವರಗಳಿಂದ ನಮಗೆ ತಕ್ಕಮಟ್ಟಿಗೆ ಈ ವಿಷಯ ತಿಳಿದು ಬರುತ್ತದೆ.

ಬೆಳಗಾಂವಿ ಜಿಲ್ಲೆಯಲ್ಲಿರುವ ದೇಗಾಂವೆಯಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸುವ ಯೋಜನೆ ಗೋವೆಯ ಕದಂಬ

ರಾಜ ಶಿವಚಿತ್ತನರಾಣಿ ಕಮಲಾದೇವಿಗೆ ಬಂದಿತು. ಒಂದು ದಿನ ರಾಜನು ಸಭೆಯಲ್ಲಿದ್ದಾಗ ರಾಣಿ, "ದೇಗಾಂವೆ ಗ್ರಾಮವನ್ನು ನಾನು ಬ್ರಾಹ್ಮಣರಿಗೆ ಕೊಡಬೇಕೆಂದಿದ್ದೇನೆ" ಎಂದು ತನ್ನ ಅಭಿಲಾಷೆಯನ್ನು ತಿಳಿಸುತ್ತಾಳೆ. ರಾಣಿಯ ಈ ಬಿನ್ನಹವನ್ನು ರಾಜನು ಮಂತ್ರಿಗಳ ಮುಂದೆ ಇಡುತ್ತಾನೆ. ಅವರೆಲ್ಲ ಆಲೋಚನೆ ಮಾಡಿ ತಮ್ಮ ಸಮ್ಮತಿಯನ್ನು ಸೂಚಿಸುತ್ತಾರೆ. ರಾಣಿಯು ಆರಿಸಿದ ಬ್ರಾಹ್ಮಣರು ಅನೇಕ ದೇಶಗಳಿಂದ ಬಂದಿದ್ದರು. ಅವರು ವೇದ, ವೇದಾಂಗ, ಸ್ಮೃತಿ, ಇತಿಹಾಸ ಪುರಾಣ, ಜ್ಯೋತಿಷ, ಖಗೋಳ ಶಾಸ್ತ್ರ, ನ್ಯಾಯ, ಮೀಮಾಂಸೆ, ಸಾಂಖ್ಯ, ಯೋಗಗಳಲ್ಲಿ ಪರಿಣತರೂ ಷಟ್‌ಕರ್ಮನಿರತರೂ ಆಗಿದ್ದರು. ಇವರೆಲ್ಲರನ್ನೂ ರಾಜನು ತಾನೇ ಪರೀಕ್ಷಿಸಿ ರಾಣಿಯ ಸಲಹೆಯನ್ನು ಸ್ವೀಕರಿಸಿದನು. ಹೊಸದಾಗಿ ಸ್ಥಾಪಿತವಾದ ಅಗ್ರಹಾರದಲ್ಲಿ ಅವರಿಗೆ ಈ ರೀತಿಯಾಗಿ ವೃತ್ತಿಯನ್ನು ಕೊಡಮಾಡಲಾಯಿತು.

೧ ವೃತ್ತಿ ಪ್ರತಿಯೊಬ್ಬ ಭಟ್ಟೋಪಾಧ್ಯಾಯನಿಗೆ (೧೦ ಜನರ ಹೆಸರುಗಳಿವೆ)

೩ ವೃತ್ತಿ ,, ,, ,, ,,

೧ ,, ಸೂತ್ರವನ್ನು ಕಲಿಸುವದಕ್ಕೆ

೩ ,, ಋಗ್ವೇದವನ್ನು ಕಲಿಸುವದಕ್ಕೆ

೩ ,, ಯಜುರ್ವೇದವನ್ನು ಕಲಿಸುವದಕ್ಕೆ

೨ ,, ಬಾಲಶಿಕ್ಷೆಯ ಉಪಾಧ್ಯಾಯರಿಗೆ

೨ ,, ಕುಡಿಯುವ ನೀರನ್ನು ಪೂರೈಸುವವರಿಗೆ

೩ ,, ಸತ್ರಕ್ಕೆ

ಉಳಿದ ವೃತ್ತಿಗಳು ದೇವರ ಸೇವೆಗೆ (?)

ಈ ಶಾಸನವನ್ನು ಬರೆದ ಕವಿ ಗೋವಿಂದನು ತನ್ನ ಬುದ್ಧಿ ತರ್ಕಶಾಸ್ತ್ರ, ತಂತ್ರ ಮತ್ತು ಅಲಂಕಾರ ಶಾಸ್ತ್ರಗಳಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿತ್ತು ಎಂದು ಹೇಳಿಕೊಂಡಿದ್ದಾನೆ. ಇಂಥ ವಿದ್ವಾಂಸರಿಂದಲೇ ಭಾರತೀಯ ಜ್ಞಾನಭಾಂಡಾರ ಶತಕಗಳವರೆಗೂ ಉಳಿದುಕೊಂಡು ಬಂದಿದೆ.

## ಬ್ರಹ್ಮಪುರಿ

ಅಗ್ರಹಾರ ಮತ್ತು ಬ್ರಹ್ಮಪುರಿಗಳಿಗೆ ಇದ್ದ ವ್ಯತ್ಯಾಸವೆಂದರೆ ಮೊದಲನೆಯದು ಒಂದು ಹಳ್ಳಿ, ಎರಡನೆಯದು ಒಂದು ಪಟ್ಟಣ ಅಥವಾ ಪಟ್ಟಣದ ಒಂದು ಭಾಗ. ಇಷ್ಟೇ ಹೊರತು ಅವುಗಳನ್ನು ಸ್ಥಾಪಿಸುವ ಉದ್ದೇಶದಲ್ಲಿ ವ್ಯತ್ಯಾಸವಿರಲಿಲ್ಲ. ಎರಡರಲ್ಲಿಯೂ ವಿದ್ವಾಂಸರು ತಮ್ಮ ವ್ಯಾಸಂಗವನ್ನು ಮುಂದುವರಿಸುತ್ತಿದ್ದರು. ಮತ್ತು ಇತರರಿಗೆ ವಿದ್ಯಾದಾನವನ್ನು ಮಾಡುತ್ತಿದ್ದರು. ಈ ಮಾತಿನ ಯಥಾರ್ಥತೆಯನ್ನು ಒಂದು ಬ್ರಹ್ಮಪುರಿಯ ಸ್ಥಾಪನೆಯಾದ ರೀತಿಯಿಂದ ತಿಳಿದುಕೊಳ್ಳಬಹುದು. ಈ ಬ್ರಹ್ಮಪುರಿಯನ್ನು ಬನವಾಸಿಯ ದಂಡನಾಯಕ ಕೇಶವದೇವನು ಬಳ್ಳಿಗಾವೆಯಲ್ಲಿ ಸ್ಥಾಪಿಸಿದನು. ಇದರಲ್ಲಿ ೩೮ ಜನ ಬ್ರಾಹ್ಮಣರು ಇರಲು ವ್ಯವಸ್ಥೆ ಮಾಡಿತ್ತು. ಇವರು ಸ್ಮೃತಿ, ಕಾವ್ಯ, ನಾಟಕಗಳಲ್ಲಿ ಭಾಷ್ಯ, ಮಂಜರಿ[೧] ಯಲ್ಲಿಯೂ ಪರಿಣತರಿದ್ದರು.

ಈ ಬ್ರಾಹ್ಮಣರ ವಸತಿಗೆ ಕೇಶವದೇವರು ಮಾಡಿದ ವ್ಯವಸ್ಥೆ ಹೀಗಿತ್ತು.

"ಮೃದುತೂಲಿಕವನ್ನುಳ್ಳ ಮಂಚದಿಂದೊಡಗೂಡಿದ ಕೋಣೆಗಳುಳ್ಳ ವಿಶಾಲ ಮನೆಗಳನ್ನು ಮತ್ತು ವಿವಿಧ ಪಾತ್ರೆಗಳನ್ನು ದಂಡನಾಯಕ ಚೂಡಾಮಣಿಯು ಬ್ರಾಹ್ಮಣ ಸಮು

೧ ಯಾವದೊ ಗ್ರಂಥವಿರಬೇಕು.

ದಾಯಕ್ಕೆ ಕೊಟ್ಟನು. ತತ್ಕಾರಣದಿಂದ ವೀರಕೇಶವ ಪುರವು, ಸಕಲ ವೇದಗಳು ವಿಲಾಸದಿಂದ ನೆಲಸಿದ, ಶುದ್ಧ ಆಚಾರ ಸುಗುಣಗಳ ಖಣಿಯಾದ, ಪುಣ್ಯ ಭೂಮಿಯಾದ, ಭೂದೇವಿಯ ನವರತ್ನಖಚಿತ ನೂಪುರವೆನಿಸಿದ ಕೃತಯುಗವೆಂದು ಎಲ್ಲೆಡೆಗೂ ವಿಖ್ಯಾತವಾಯಿತು."

ಬ್ರಹ್ಮಪುರಿಗಳು ಎಲ್ಲ ರಾಜಧಾನಿಗಳಲ್ಲಿಯೂ ಇದ್ದವು. ಉದಾ. ಸೂಡಿ, ವಿಕ್ರಮಪುರ, ಬಳ್ಳಿಗಾವೆ, ಅಣ್ಣಿಗೇರಿ, ಕಲ್ಬುರಿಗೆ, ಇತ್ಯಾದಿ.

## ಮಠಗಳು

ಪ್ರಾಚೀನ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧಿಯಾದ ಮಠ ಬಳ್ಳಿಗಾವೆಯ ಕೋಡಿಯ ಮಠ. ಇದಕ್ಕೆ ಎರಡು ಕಾರಣಗಳಿದ್ದವು. ಅದು ಒಂದು ಬರಿಯಮಠ ಅಥವಾ ವಿದ್ಯಾಕೇಂದ್ರವಾಗಿರದೆ, ವಿವಿಧೋದ್ದೇಶದ ಸಾರ್ವಜನಿಕ ಸಂಸ್ಥೆಯೂ ಆಗಿತ್ತು. ಇದರಿಂದ ಅನೇಕ ವಿಧದ ಜನರಿಗೆ ಹಲವಾರು ತೆರಗಳಲ್ಲಿ ಉಪಕಾರವಾಗುತ್ತಿತ್ತು. ಇದರ ಅಧಿಪತಿಗಳು ಅತ್ಯಂತ ಮೇಧಾವಿಗಳಿದ್ದರು. ಅವರ ವಿದ್ವತ್ತಿನಿಂದ ಪಾಂಡಿತ್ಯಕ್ಕೆ, ವಿದ್ಯಾಪ್ರಸಾರಕ್ಕೆ ಬೆಲೆ ಇರುವವರೆಗೂ ಆ ಸಂಸ್ಥೆಯ ಖ್ಯಾತಿಯು ಇರುತ್ತಿತ್ತು.

ಕೋಡಿಯ ಮಠದಲ್ಲಿ ಈ ಕೆಳಗಿನ ಸಂಸ್ಥೆಗಳು ಪ್ರಮುಖವಾಗಿದ್ದವು.

೧) ಶೈವ ದೇವಾಲಯ
೨) ಅನುಷ್ಠಾನ ಭವನ
೩) ವೈದ್ಯ ಶಾಲೆ

೪) ಸತ್ರ
೫) ಶಿಕ್ಷಣ ಕೇಂದ್ರ

ಸದ್ಯಕ್ಕೆ ನಮಗೆ ಆಸಕ್ತಿಯಿರುವ ಶಿಕ್ಷಣ ಪ್ರಸಾರವನ್ನಷ್ಟೇ ತೆಗೆದುಕೊಂಡರೆ ಕೋಡಿಯಮಠದ ಕೊಡುಗೆಯನ್ನು ಈ ರೀತಿ ಹೇಳಬಹುದು. ಈ ಮೊದಲೇ ಹೇಳಿದಂತೆ ಇದರ ಅಧಿಪತಿಗಳು ದೊಡ್ಡ ವಿದ್ವಾಂಸರಿದ್ದರು. ಇವರೆಲ್ಲಾ ಕಾಳಾಮುಖರು. ಆಗಿನ ಕಾಲದಲ್ಲಿ ಅಂದರೆ ೧೦ನೇ ಶತಮಾನದಿಂದ ೧೩ನೇ ಶತಮಾನದ ವರೆಗೂ ಕರ್ನಾಟಕದಲ್ಲಿ ಕಾಳಾಮುಖರ ಪ್ರಾಬಲ್ಯವು ಬಹಳ ವಿತ್ತು. ಇವರು ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದವರು. ಕರ್ನಾಟಕದ ಶಿಕ್ಷಣ ಸಂಸ್ಥೆಗಳ ಇತಿಹಾಸದಲ್ಲಿ ಕಾಳಾಮುಖರಿಗೆ ಮಹತ್ವದ ಸ್ಥಾನವಿದೆ. ಇವರನ್ನು 'ಶಿಷ್ಯಚಾತಕ ವರ್ಷಕಾಲ ಮುಖರ್' ಎಂದು ವರ್ಣಿಸಲಾಗಿದೆ. ( ಶಿಷ್ಯರೆಂಬ ಚಾತಕ ವರ್ಗಕ್ಕೆ ಮಳೆಗಾಲದಂತಿದ್ದವರು. ) ಎಲ್ಲ ಶೈವರ ದೇವಸ್ಥಾನ ಗಳೂ, ಮಠಗಳೂ, ವಿದ್ಯಾಪೀಠಗಳೂ ಇವರ ವಶದಲ್ಲಿದ್ದವು. ಮುಂದೆ ಇವರ ಕೆಲವು ಮಠಗಳು ವೀರಶೈವರ ಆಧೀನವಾದವು.

ಕೋಡಿಯ ಮಠವನ್ನು ಮುಂದೆ ತಂದವರಲ್ಲಿ ಮುಖ್ಯರು ಮೂರನೆಯ ಗುರುವಾದ ಸೋಮೇಶ್ವರನು ಮತ್ತು ಅವನ ತರುವಾಯ ಎರಡನೆಯ ವಾಮಶಕ್ತಿಯು. ವಾಮಶಕ್ತಿಯು ೪೩ ವರ್ಷಗಳ ವರೆಗೆ ಮಠದ ಅಧಿಪತಿಯಾಗಿದ್ದನು. ಆತನ ಬ್ರಹ್ಮಚಾರಿ ಶಿಷ್ಯರು ಯಾವಾಗಲೂ ಬಿಡದೆ ಅವನ ಸುತ್ತಲೂ ಇರುತ್ತಿದ್ದರು. ಇದಕ್ಕೆ ಕಾರಣವನ್ನು ಆ ಶಾಸನವು ಹೇಳುತ್ತದೆ. ಅದೇನೆಂದರೆ ಅವನ ವಿದ್ಯಾರ್ಥಿಗಳ ಆಸೆ ಆಕಾಂಕ್ಷೆಗಳೆಲ್ಲ ಅವನಲ್ಲಿ ಕೇಂದ್ರೀಕೃತವಾಗಿದ್ದವು.

ಆತನ ವಿದ್ವತ್ತು ಅದ್ಭುತವಾಗಿತ್ತು. ಕೆಲವರು ಒಂದು ಶಾಸ್ತ್ರವನ್ನು ಹೊಸದಾಗಿ ಕಂಡುಹಿಡಿಯುತ್ತಾರೆ ಅಥವಾ ನಿರ್ಮಿಸುತ್ತಾರೆ; ಇತರರು ಸರಿಯಾದ ಭಾಷೆಯಲ್ಲಿ ಅದಕ್ಕೆ ಒಂದು ಸ್ವರೂಪವನ್ನು ಕೊಡುತ್ತಾರೆ. ಇನ್ನೂ ಕೆಲವರು ಆ ಶಾಸ್ತ್ರವನ್ನು ಬೆಳೆಸುತ್ತಾರೆ. ಇದು ಸಾಧಾರಣವಾದ ನಿಯಮ. ಆದರೆ ವಾಮಶಕ್ತಿಯು ಇದೆಲ್ಲವನ್ನು ಒಬ್ಬನೇ ಮಾಡುವದಲ್ಲದೇ ಆ ಶಾಸ್ತ್ರವು ತಿಳಿಯದೆ ಇರುವವರಿಗೆ ತಿಳಿಯುವಂತೆ ಪಾಠವನ್ನು ಕೂಡ ಹೇಳಿಕೊಡುತ್ತಿದ್ದನಂತೆ.

ಇನ್ನೊಂದು ಮಠದ ಉದಾಹರಣೆಯನ್ನು ಇಲ್ಲಿ ಕೊಡಬಹುದು. ಇದು ನಾಗಾಯಿಯ ಮಧುಸೂದನ ದೇವಸ್ಥಾನಕ್ಕೆ ಸೇರಿದ ಮಠ. ನಾಗಾಯಿ ಈಗ ಗುಲಬರ್ಗಾ ಜಿಲ್ಲೆಯ ಚಿತ್ತಾಪುರದ ಹತ್ತಿರವಿರುವ ಒಂದು ನಿರ್ಜನ ಗ್ರಾಮ. ಆದರೆ ಇವತ್ತಿಗೂ ಈ ಕುಗ್ರಾಮದ ಒಂದು ಭಾಗಕ್ಕೆ ಮಠವೆನ್ನುವ ಹೆಸರು ಜನರ ಸ್ಮೃತಿಯಲ್ಲಿ ಅಚ್ಚಳಿಯದೆ ಉಳಿದಿದೆ. ಮಠದ ಉಚ್ಛ್ರಾಯ ಕಾಲದಲ್ಲಿ ಅದು ಭವ್ಯವಾಗಿ ಇದ್ದಿರಬೇಕು. ಅದರ ದ್ವಾರ ಗೋಪುರವು ಮೂರು ಅಂತಸ್ತಿನದಾಗಿತ್ತು. ಅದರಲ್ಲಿ ಒಂದು ಅನುಷ್ಠಾನ ಭವನವಿತ್ತು. ಇದರಲ್ಲಿ ಏಕ ದಂಡಿ, ತ್ರಿದಂಡಿ ತಪಸ್ವಿಗಳು, ಸ್ನಾತಕರು, ಬ್ರಹ್ಮಚಾರಿಗಳು, ಹಂಸ, ಪರಮಹಂಸ ಸನ್ಯಾಸಿಗಳು ತಮ್ಮ ಅನುಷ್ಠಾನವನ್ನು ನಡೆಯಿಸಬಹುದಾಗಿತ್ತು. ನಾಲ್ಕು ವೇದಗಳನ್ನು ಅಭ್ಯಸಿಸುತ್ತಿದ್ದ ಸಾವಿರಾರು ಶಾಖೆಗಳ ವಿದ್ಯಾರ್ಥಿಗಳಿಗೆ ಅಲ್ಲಿ ವಸತಿ ಸೌಕರ್ಯವಿತ್ತು. ಒಂದು ನರ್ತನ ಶಾಲೆಯೂ ಇತ್ತು. ಇವೆಲ್ಲವೂ ಭವ್ಯವಾದ ಪಟಾಂಗಣದಲ್ಲಿದ್ದವು.

ಮಠದ ಕಾರ್ಯಕಲಾಪಗಳು ಸುಗಮವಾಗಿ ನಡೆಯು ವದಕ್ಕೆ ೧೦೪೫ ಮತ್ತರು ಭೂಮಿಯನ್ನು ಕೊಟ್ಟಿದ್ದರು. ಅದರಲ್ಲಿ ೩ ಜನ ಅಧ್ಯಾಪಕರು, ಒಬ್ಬ ಪುರಾಣಭಟ್ಟ, ದೇವಸ್ಥಾನ ಮತ್ತು ಮಠದ ಕಟ್ಟಡಗಳನ್ನು ವ್ಯವಸ್ಥಿತವಾಗಿ ಇಡುವದಕ್ಕೆ ೪ ಜನ ವಾಸ್ತುಶಿಲ್ಪಿಗಳು, ಒಬ್ಬ ಪಾರುಪತ್ಯಗಾರ ಮತ್ತು ಮೂವರು ಕಾಪಿನ ಘಟಿಯಾರರು ಅಥವಾ ವೇಳಾಪತ್ರಿಕೆಯಂತೆ ಕಾರ್ಯಕ್ರಮಗಳನ್ನು ನಡೆಯಿಸಿಕೊಂಡು ಹೋಗುವ ಅಧಿಕಾರಿಗಳು ಕೆಲಸ ಮಾಡುತ್ತಿದ್ದರು.

ಈ ಮಠದಲ್ಲಿ ಎಷ್ಟು ವಿದ್ಯಾರ್ಥಿಗಳಿರುತ್ತಿದ್ದರೆಂದು ಶಾಸನವು ಹೇಳುವದಿಲ್ಲ. ಆದರೆ ರಾಮೇಶ್ವರ ದೇವರ ಘಟಿಕೆಯಲ್ಲಿ ೨೫೭ ಜನರು ಇರುತ್ತಿದ್ದು ಅವರಿಗೆ ೧೦೦೦ ಮತ್ತರು ಭೂಮಿಯನ್ನು ದಾನ ಮಾಡಿದ್ದರು. ಈ ಮಠಕ್ಕೂ ಅಷ್ಟೆ ಭೂಮಿಯನ್ನು ಕೊಟ್ಟಿರುವದರಿಂದ ಮತ್ತು ಇಲ್ಲಿಯ ವಿದ್ಯಾರ್ಥಿಗಳು ವೇದಗಳ ಸಾವಿರಾರು ಶಾಖೆಗಳನ್ನು ಅಭ್ಯಾಸ ಮಾಡುತ್ತಿದ್ದುದರಿಂದ ಅಷ್ಟೆ ವಿದ್ಯಾರ್ಥಿಗಳು ಇರಲಿಕ್ಕೆ ಸಾಕೆಂದು ಊಹಿಸಬಹುದಾಗಿದೆ. ಇವೆರಡು ಸಂಸ್ಥೆಗಳಲ್ಲದೇ ನಾಗಾಯಿಯ ಮೂರನೆಯ ಸಂಸ್ಥೆಯಲ್ಲಿಯೂ ೪೦೦ ಜನ ವಿದ್ಯಾರ್ಥಿಗಳಿದ್ದರು. ಅರ್ಥಾತ್ ಆ ಊರಿನಲ್ಲಿ ೨೫೭ ಘಟಿಕೆಯಲ್ಲಿ, ೨೫೭ ಮಠದಲ್ಲಿ, ಆ ಊರಿನ ಮೂರನೆಯ ಸಂಸ್ಥೆಯಲ್ಲಿ ೪೦೦ ಅಲ್ಲದೆ ಅಧಿಕಾರಿಗಳು ಮತ್ತು ಪರಿಚಾರಕರು. ಹೀಗೆ ಒಟ್ಟು ಸಾವಿರಕ್ಕೂ ಕಡಿಮೆಯಿಲ್ಲದಷ್ಟು ಜನರಿದ್ದರು. ನಾಲಂದವನ್ನು ಬಿಟ್ಟರೆ ಜೇರಿಲ್ಲಿಯೂ ಇಷ್ಟು ದೊಡ್ಡ ಸಂಸ್ಥೆಯಿದ್ದ ಉಲ್ಲೇಖಗಳಿಲ್ಲ.

## ದೇವಸ್ಥಾನಗಳು

ಹಲವು ದೇವಸ್ಥಾನಗಳಲ್ಲಿ ವಿದ್ಯಾದಾನಕ್ಕೆ ಏರ್ಪಾಡು ಇತ್ತು; ಇವುಗಳಲ್ಲಿ ಬಾಲಶಿಕ್ಷೆ, ಪ್ರೌಢಶಿಕ್ಷೆಗಳಿಗೆ ಅವಕಾಶವಿತ್ತು. ಚಿತ್ರದುರ್ಗ ಜಿಲ್ಲೆಯ ಹರಿಹರದ ಹರಿಹರೇಶ್ವರ ದೇವಸ್ಥಾನದಲ್ಲಿ ೬ ಪಂಡಿತರು ಋಗ್ವೇದ, ಯಜುರ್ವೇದ, ವ್ಯಾಕರಣ, ಮೀಮಾಂಸ ಅಕ್ಷರ ಶಿಕ್ಷೆಗಳನ್ನು ಕಲಿಸುತ್ತಿದ್ದರು. ತಾಳಗುಂದದ ಪ್ರಣವೇಶ್ವರ ದೇವಸ್ಥಾನದಲ್ಲಿ ಕ್ರಿ. ಶ. ೧೧೫೮ ರಲ್ಲಿ ಬನವಾಸಿ ಮಂಡಲದ ಅಧಿಕಾರಿ ಕೇಶವ ದಂಡನಾಯಕನು (ಹಿಂದೆ ಹೇಳಿದ ಕೇಶವಪುರ ಬ್ರಹ್ಮಪುರಿಯ ಸ್ಥಾಪಕನೂ ಈತನೇ.) ಮಾಡಿದ ದಾನದ ಪ್ರಕಾರ ೬ ಪಂಡಿತರು ಋಗ್ವೇದ, ಯಜುರ್ವೇದ, ಪದಪಾಠ, ಸಾಮವೇದ, ಕಲ್ಪ, ರೂಪಾವತಾರ, ನ್ಯಾಸಗಳನ್ನು ಒಳಗೊಂಡ ಶಬ್ದಶಾಸ್ತ್ರ, ಪ್ರಭಾಕರ, ವೇದಾಂತ ಇವುಗಳನ್ನು ಕಲಿಸುತ್ತಿದ್ದರು. ಇಲ್ಲಿಯ ಪ್ರಾಥಮಿಕ ವಿಭಾಗದಲ್ಲಿ ಎಷ್ಟು ವಿದ್ಯಾರ್ಥಿಯರಿದ್ದರೋ ಗೊತ್ತಿಲ್ಲ. ಉಚ್ಚ ಶಿಕ್ಷಣ ಶಾಖೆಯಲ್ಲಿ ೪೮ ವಿದ್ಯಾರ್ಥಿಗಳಿಗೆ ಸ್ಥಾನವಿತ್ತು. ೬ ಉಪಾಧ್ಯಾಯರಲ್ಲಿ ತಲಾ ೮ ರಂತೆ ವಿದ್ಯಾರ್ಥಿಗಳಿದ್ದರು. ವಿದ್ಯಾರ್ಥಿ ಉಪಾಧ್ಯಾಯರ ಈ ಪ್ರಮಾಣ (ratio) ಈಗಿನ ಕಾಲದಲ್ಲಿಯೂ ಆದರ್ಶವಾಗಿದೆಯೆನಿಸಿಕೊಳ್ಳುತ್ತದೆ.

ದೇವಸ್ಥಾನಗಳು, ಅಗ್ರಹಾರ, ಮಠ, ಘಟಿಕೆಗಳಿಗಿಂತ ಹೆಚ್ಚಾಗಿದ್ದವು. ಎಲ್ಲ ದೇವಸ್ಥಾನಗಳಲ್ಲಿಯೂ ವಿದ್ಯಾದಾನ ಅಥವಾ ಶಾಲಾ ಕೈಂಕರ್ಯವಿಲ್ಲದಿದ್ದರೂ ಇತರ ವಿಧಗಳಲ್ಲಿ ದೇವಸ್ಥಾನಗಳು ಜನರ ತಿಳುವಳಿಕೆಯನ್ನು ಹೆಚ್ಚಿಸುವದಲ್ಲಿದೇ

ಮನರಂಜನೆಗೆಂದು ಉತ್ಸವ, ಕಥಾಕಾಲಕ್ಷೇಪ ಮುಂತಾದ ವನ್ನು ಒದಗಿಸಲು ಪ್ರಯತ್ನಿಸುತ್ತಿದ್ದವು.

## ಗುರುಗೃಹ

ಕೊನೆಯ ವಿದ್ಯಾಕೇಂದ್ರ ಗುರುಗಳ ಮನೆ. ವಡ್ಡಾರಾಧನೆಯಲ್ಲಿ ಬರುವ ಸುಕುಮಾರಸ್ವಾಮಿಯ ಕಥೆಯಲ್ಲಿ ಉಪಾಧ್ಯಾಯರ ಮನೆಯಲ್ಲಿ ವಿದ್ಯಾಭ್ಯಾಸ ಹೇಗೆ ನಡೆಯುತ್ತಿತ್ತು ಎನ್ನುವದಕ್ಕೆ ಸೊಗಸಾದ ಉದಾಹರಣೆಯಿದೆ. ಕೌಶಾಂಬಿಯ ಅರಸು ಅತಿಬಲನ ಮಂತ್ರಿ ಸೋಮಶರ್ಮ. ಈತನಿಗೆ ಕಾಶ್ಯಪಿಯೆಂಬ ಮಡದಿಯಲ್ಲಿ ಹುಟ್ಟಿದ ಮಕ್ಕಳು ಅಗ್ನಿಭೂತಿ ಮತ್ತು ವಾಯುಭೂತಿ. ಇವರಿಬ್ಬರೂ ಯಾರ ಮಾತನ್ನೂ ಕೇಳದೇ ನಿರಕ್ಷರ ಕುಕ್ಷಿಗಳಾಗಿದ್ದರು.

ಸೋಮಶೇಖರನು ತೀರಿಕೊಂಡ ಮೇಲೆ ಅವನ ಮಕ್ಕಳನ್ನು ಮಂತ್ರಿಗಳನ್ನಾಗಿ ಮಾಡಲು ಬರುವದೇ ಎಂದು ಅತಿಬಳ ರಾಜ ವಿಚಾರಿಸಿದ. ಅವರು ಯಾವ ಕೆಲಸಕ್ಕೂ ಬಾರದವರೆಂದು ಸಭಿಕರು ಹೇಳಿದರು. ಮಕ್ಕಳ ಅಯೋಗ್ಯತೆಯನ್ನು ಕಂಡು ಕಾಶ್ಯಪಿ ಕೊರಗಿದಳು. ನಂತರ ಕೊರಗಿ ಪ್ರಯೋಜನವಿಲ್ಲೆಂದು ಮಕ್ಕಳನ್ನು ಹತ್ತಿರ ಕರೆದು, “ಇನ್ನಾದರೂ ನನ್ನ ಮಾತನ್ನು ಕೇಳಿ, ನನ್ನ ಅಣ್ಣ ಸೂರ್ಯಮಿತ್ರ ರಾಜಗೃಹದ ಸುಬಲ ರಾಜನ ಮಂತ್ರಿ. ಒಳ್ಳೆಯ ವಿದ್ಯಾವಂತ. ನೀವಿಬ್ಬರೂ ಅವನ ಹತ್ತಿರ ವಿದ್ಯೆ ಕಲಿತು ಬುದ್ಧಿವಂತರಾಗಿ ಬನ್ನಿ. ನಾನು ಅವನಿಗೆ ಪತ್ರವನ್ನು ಕೊಡುತ್ತೇನೆಂದು ಹೇಳಿ ಪತ್ರದಲ್ಲಿ ‘ಇವರು ಇಷ್ಟು ದಿನಗಳನ್ನು ಹಾಳು

ಮಾಡಿದ್ದಾರೆ. ಇವರನ್ನು ಬುದ್ಧಿವಂತರನ್ನಾಗಿ ಮಾಡುವದು ನಿನ್ನ ಭಾರ'ವೆಂದು ತಿಳಿಸಿದಳು. ಅದರ ಪ್ರಕಾರ ಅವರಿಬ್ಬರೂ ರಾಜಗೃಹಕ್ಕೆ ಹೋಗಿ ಸೋದರಮಾವ ಸೂರ್ಯಮಿತ್ರನ ಮನೆಗೆ ಬಂದು ಪತ್ರವನ್ನು ಕೊಟ್ಟರು. ಅದನ್ನು ಓದಿ ಆತನು, 'ನನ್ನ ಹೆಸರು ಸೂರ್ಯಮಿತ್ರನೆಂಬುದು ನಿಜ. ಆದರೆ ನನಗೆ ಕಾಶ್ಯಪಿಯೆಂಬ ತಂಗಿಯಿಲ್ಲ. ಆದರೆ ವಿದ್ಯೆ ಕಲಿಯಲು ಬಂದ ನೀವು ಹಾಗೇ ತಿರುಗಿ ಹೋಗಬೇಡಿ. ಭಿಕ್ಷೆಯಿಂದ ಹೊಟ್ಟೆ ಹೊರೆದು ಕಲಿಯುವದಾದರೆ ನಿಮ್ಮನ್ನು ಪಂಡಿತರನ್ನಾಗಿ ಮಾಡುವೆನು' ಎಂದು ಹೇಳಿ, ಒಂದು ಶುಭ ಮುಹೂರ್ತದಲ್ಲಿ ಮಕ್ಕಳ ಶಿಕ್ಷಣಾರಂಭವನ್ನು ಮಾಡಿದನು. ಹಗಲೂ ರಾತ್ರಿ ನಿರ್ಬಂಧದಿಂದ ಅವರನ್ನು ಓದಿಸಿ ಏಳೆಂಟು ವರ್ಷಗಳೊಳಗೆ ನಾಲ್ಕು ವೇದ, ಆರು ಅಂಗ, ಹದಿನೆಂಟು ಧರ್ಮಶಾಸ್ತ್ರ, ಮೀಮಾಂಸ, ನ್ಯಾಯ, ಪ್ರಮಾಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಚಾಣಕ್ಯ, ಸಾಮುದ್ರಿಕ, ಶಾಲಿ-ಹೋತ್ರ, ಪಾಲಕಾಪ್ಯ, ಹಾಸಿತ, ಚರಕ, ಅತ್ರಿನೀಮತ, ಬಾಹಲ, ಸುಶ್ರುತ, ಕ್ಷಾರಪಾನೀಯ ಮೊದಲಾದ ನರ ವೈದ್ಯಗಳನ್ನು, ಜೋತಿಷ, ಮಂತ್ರವಾದ ಮೊದಲಾದ ಶಾಸ್ತ್ರಗಳನ್ನು ಕಲಿಸಿ ಯೋಗ್ಯರನ್ನಾಗಿ ಮಾಡಿದನು. ಎಲ್ಲ ಮುಗಿದ ಮೇಲೆ ಅವರನ್ನು ಹತ್ತಿರ ಕರೆದು ನೀವು ನನ್ನ ತಂಗಿಯ ಮಕ್ಕಳು. ಸೋದರಳಿಯಂದಿರು. ನಿಮಗೆ ಸಲಿಗೆ ಕೊಟ್ಟರೆ ಕೆಟ್ಟು ಹೋಗುತ್ತೀರಿ ಎಂದು ನಿಜವಾದ ಸಂಗತಿಯನ್ನು ನಿಮಗೆ ಹೇಳಲಿಲ್ಲ. ಈಗ ಎಲ್ಲಾ ವಿದ್ಯೆಯನ್ನು ಕಲಿತಿದ್ದೀರಿ. ನಿಮ್ಮೂರಿಗೆ ಹೋಗಿ ಸುಖವಾಗಿರಿ ಎಂದು ಬೀಳ್ಕೊಟ್ಟನು. ಅವರು ವಿದ್ಯಾವಂತರಾಗಿ ತಿರುಗಿ ಬಂದದ್ದನ್ನು ನೋಡಿ ತಾಯಿ ಸಂತೋಷಪಟ್ಟಳು.

ಅವರ ರಾಜನು ಅವರನ್ನು ಸಭೆಯಲ್ಲಿ ಪರೀಕ್ಷೆ ಮಾಡಿ ನೋಡಿ ಅವರನ್ನು ಮಂತ್ರಿಗಳನ್ನಾಗಿ ಮಾಡಿದನು.

## ವ್ಯಾಸಂಗದ ವ್ಯವಸ್ಥೆ

ವಿವಿಧ ವಿದ್ಯಾಸಂಸ್ಥೆಗಳ ಸ್ವರೂಪವನ್ನು ತಿಳಿದುಕೊಂಡ ಮೇಲೆ ಅವುಗಳಿಗೆಲ್ಲಾ ಇದ್ದ ಸಮಸ್ಯೆಗಳನ್ನು ಪರಿಶೀಲಿಸೋಣ.

ಈ ವಿದ್ಯಾಸಂಸ್ಥೆಗಳಿಗೆ ಸಂಬಂಧಪಟ್ಟ ಅಧಿಕಾರಿಗಳು, ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ಎಲ್ಲರೂ ಒತ್ತಟ್ಟಿಗೆ ಇರುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಸ್ನಾತಕರು, ಛಾತ್ರರು, ಬ್ರಹ್ಮಚಾರಿಗಳು ಅಥವಾ ಮಾಣಿಗಳು[೧] ಎಂಬ ವರ್ಗದವರು ಇರುತ್ತಿದ್ದರು. ಉಪಾಧ್ಯಾಯರಲ್ಲಿ ಆಚಾರ್ಯರು, ಭಟ್ಟರು, ಭಟ್ಟೋಪಾಧ್ಯಾಯರು ಪಂಡಿತರು ಮತ್ತು ಅಕ್ಕರಿಗರು ಎಂಬ ಭೇದವಿತ್ತು. ವಿದ್ಯಾರ್ಥಿ-ತಪೋಧನರೂ ಮತ್ತು ಸನ್ಯಾಸಿಗಳೂ ಇರುತ್ತಿದ್ದರು. **ಇವರಲ್ಲಿ,** ಹಂಸ, ಪರಮ ಹಂಸ, ಏಕದಂಡಿ, ತ್ರಿದಂಡಿಗಳೆಂಬ **ಪ್ರಕಾರಗಳಿ**ದ್ದವು. ಅಧಿಕಾರಿಗಳಲ್ಲಿ ನಾಗಾಯಿಯಲ್ಲಿ ಒಬ್ಬ ಪಾರುಪತ್ಯಗಾರರು ಮಠದ ಭೂಮಿಗಳ ಮೇಲ್ವಿಚಾರಣೆ ಮಾಡುತ್ತಿದ್ದರು. ಕಾಸಿನ ಘಟಿಯಾರರು ವೇಳೆಗೆ ಸರಿಯಾಗಿ ಕಾರ್ಯಕ್ರಮಗಳು ನಡೆಯುತ್ತವೆಯೋ ಎಂದು ನೋಡಿಕೊಳ್ಳುತ್ತಿದ್ದರು. ಸೂಡಿ, ಮೋರಿಂಗೆರೆ ಮುಂತಾದ ಸ್ಥಳಗಳಲ್ಲಿ ಘಳಿಗೆಯ ಮಾಣಿಯರು

---

೧ ಮಾಣವಕ, ಮಾಣವದಿಂದ ಮಾಣಿ ಶಬ್ದ ಬಂದಿದೆ. ಪಾಣಿನಿ ಮತ್ತು ಇತ್ಸಿಂಗ್ ಇಬ್ಬರೂ ವಿದ್ಯಾರ್ಥಿ ಅನ್ನುವ ಅರ್ಥದಲ್ಲಿ ಈ ಶಬ್ದವನ್ನು ಉಪಯೋಗಿಸಿದ್ದಾರೆ. ಈಗಲೂ ಉತ್ತರ ಮತ್ತು ದಕ್ಷಿಣ ಕನ್ನಡಗಳಲ್ಲಿ ಚಿಕ್ಕ ಮಕ್ಕಳನ್ನು ಮಾಣಿಯೆಂದು ಕರೆಯುತ್ತಾರೆ.

ವೇಳೆಯನ್ನು ತಿಳಿಸುತ್ತಿದ್ದರು. ನಾಗಾಯಿಯ ಘಟಿಕೆಯಲ್ಲಿ ೬ ಜನ ಸರಸ್ವತೀ ಭಂಡಾರಿಗರು ಇದ್ದುದನ್ನು ನಾವು ನೋಡಿದ್ದೇವೆ. ಅದೇ ಊರಿನ ಮಠದಲ್ಲಿ ಕಟ್ಟಡಗಳನ್ನು ಸರಿಯಾದ ಸ್ಥಿತಿಯಲ್ಲಿರಿಸಲು ವಾಸ್ತು ಶಿಲ್ಪಿಗಳನ್ನು ನೇಮಿಸಿದ್ದರು. ಕೆಲವು ವಿದ್ಯಾಸಂಸ್ಥೆಗಳಲ್ಲಿ ವಿದ್ಯಾರ್ಥಿಗಳು ಸರಿಯಾಗಿ ಅಭ್ಯಾಸ ಮಾಡುತ್ತಾರೋ ಇಲ್ಲವೋ ಎನ್ನುವದನ್ನು ನೋಡುವದಕ್ಕೇ ಅಧಿಕಾರಿಗಳಿರುತ್ತಿದ್ದರು.[೧]

## ಉಪಾಧ್ಯಾಯರಿಗೆ ಮತ್ತು ವಿದ್ಯಾರ್ಥಿಗಳಿಗೆ ಸೌಕರ್ಯಗಳು

ಭಾರತೀಯ ವಿದ್ವಾಂಸರೆಲ್ಲ ತಮ್ಮ ತಮ್ಮ ವಿಷಯುಗಳಲ್ಲಿ ಪರಿಣತೆಯನ್ನು ಪಡೆದಿರಲು ಹ್ಯುಯೆನ್‌ತ್ಸಾಂಗನು ಪ್ರಬಲ ಕಾರಣವೊಂದನ್ನು ಹೇಳಿದ್ದಾನೆ. ಅದೆಂದರೆ ಅವರ ಎಲ್ಲ ಬೇಡಿಕೆಗಳನ್ನು ಪೂರೈಸುವ ವ್ಯವಸ್ಥೆ. ಇದರಿಂದಾಗಿ ತಮ್ಮ ಎಲ್ಲ ಲಕ್ಷ್ಯವನ್ನು ವ್ಯಾಸಂಗದತ್ತ ಹಾಕಲಿಕ್ಕೆ ಅವರಿಗೆ ಸಾಧ್ಯವಿತ್ತು. ಈ ತೆರದ ವ್ಯವಸ್ಥೆ ಕರ್ನಾಟಕವಲ್ಲಿಯೂ ಇತ್ತು. ಊಟ, (ಉಪ್ಪಿನಕಾಯಿಗೆ ಬೇರೆ ವ್ಯವಸ್ಥೆ ಇತ್ತು) ವಸತಿ, ನೀರು, ಬಟ್ಟೆ, ಆಗಸರು, ವೈದಕೀಯ ಸಹಾಯ, ದೀಪ, ಅಭ್ಯಂಗ-ಸ್ನಾನ, ಕ್ಷೌರಿಕರು – ಅವರಿಗೆ ದೊರೆಯುತ್ತಿದ್ದ ಇವೇ ಕೆಲವು ಸೌಕರ್ಯಗಳು ಶಾಸನಗಳಲ್ಲಿ ಉಲ್ಲೇಖಿತವಾಗಿರುವವು. ಸಾಲೋಟಗಿ, ನಾಗಾಯಿ, ಕಾದಿಯೂರು ವಿದ್ಯಾಕೇಂದ್ರಗಳು

---

೧ ವಿಶ್ವ ವಿದ್ಯಾರ್ಥಿಗಳ್ ಚಿತ್ತರವಿಂಪ ಅಪ್ರೋತ್ತರ್ಣಂ ಓದುತ್ತಿರ ದೊಡಂ ಇರಿಸಕ್ಕೆ ಆಗವೆಂದುಂ ಪರಾಧೀಕ್ಷ್ಯರರೆಂದು ಇತ್ಯಾದಿ.

ತೋಟಗಳಿಂದಲೂ, ವಾಸ್ತುಶಿಲ್ಪದಿಂದಲೂ ಆಕರ್ಷಣೀಯ ವಾಗಿದ್ದವು. ಕೇಶವಪುರ ಬ್ರಹ್ಮಪುರಿಯಲ್ಲಿ ವಿದ್ವಾಂಸರ ಮನೆಗಳು ವಿಶಾಲವಾಗಿರುತ್ತಿದ್ದವು. ಒಳಗಡೆ ಪ್ರತಿಯೊಂದು ಕೊಠಡಿಯಲ್ಲಿಯೂ ಎತ್ತರವಾದ ಆಸನಗಳು, ಅವುಗಳ ಮೇಲೆ ಅತ್ಯಂತ ಮೃದುವಾದ ಮೆತ್ತೆ, ಎಲ್ಲ ತರಹದ ಪಾತ್ರೆ ಪಡಗಗಳ ಸರಬರಾಜು–ಈ ಎಲ್ಲಾ ಸೌಕರ್ಯಗಳೂ ಇದ್ದವು.

ನಾವು ಹಿಂದೆ ನೋಡಿದ ಹಾಗೆ ತಾಳಗುಂದದಲ್ಲಿ ಒಬ್ಬ ಉಪಾಧ್ಯಾಯನಿಗೆ ಎಷ್ಟು ಜನಕ್ಕೆ ಕಲಿಸಲು ಸಾಧ್ಯವಿತ್ತೊ ಅಷ್ಟೇ ವಿದ್ಯಾರ್ಥಿಗಳಿಗೆ ಪ್ರವೇಶವಿತ್ತು. ನಾಗಾಯಿಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿತ್ತು. ಅದಕ್ಕೆ ತಕ್ಕಷ್ಟು ಉಪಾಧ್ಯಾಯರಿರಲಿಲ್ಲ. ಒಬ್ಬ ಉಪಾಧ್ಯಾಯನಿಗೆ ಎಷ್ಟು ಜನ ವಿದ್ಯಾರ್ಥಿಗಳಿರಬೇಕು ಎಂಬುದಕ್ಕೆ ಆ ಕಾಲಕ್ಕೆ ಕೆಲವು ಸಲ ಇನ್ನೊಂದು ನಿರ್ಬಂಧವಿರುತ್ತಿತ್ತು. ಅವರ ಅಶನಾ ಚ್ಛಾದನಗಳಿಗೂ ಉಪಾಧ್ಯಾಯನೇ ಹೊಣೆಗಾರನಾಗಿದ್ದ. ಆದ್ದರಿಂದ ಎಷ್ಟು ಜನ ವಿದ್ಯಾರ್ಥಿಗಳಿಗೆ ಇವುಗಳನ್ನು ಪೂರೈ ಸಲು ಸಾಧ್ಯವೊ ಅಷ್ಟೇ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳ ಬೇಕಾಗಿತ್ತು.

## ಅಭ್ಯಾಸದ ವಿಷಯಗಳು

ವೇದ, ವೇದಾಂಗ, ವ್ಯಾಕರಣ, ಪುರಾಣ, ಕಾವ್ಯ, ಇತಿಹಾಸ, ಮೀಮಾಂಸ, ತರ್ಕ, ನಾಟಕ ಇತ್ಯಾದಿಗಳು ಎಲ್ಲ ಕಡೆಗೂ ಪ್ರೌಢಶಿಕ್ಷಣದ ವಿಷಯಗಳಾಗಿದ್ದವು. ಪಾಣಿನಿ, ಕೌಮಾರ, ಚಾಂದ್ರ, ಕಾತಂತ್ರ, ರೂಪಾವತಾರ, ನ್ಯಾಸ, ವ್ಯಾಕರಣಕ್ಕೆ ಭಟ್ಟ, ಮೀಮಾಂಸಕ್ಕೆ ಪ್ರಭಾಕರ ಈ ಪುಸ್ತಕ

ಗಳನ್ನು ಅನೇಕ ಶಾಲೆಗಳಲ್ಲಿ ಉಪಯೋಗಿಸುತ್ತಿದ್ದರು. ಕೆಲವು ಸಂಸ್ಥೆಗಳಲ್ಲಿ ಒಂದೇ ವಿಷಯದ ಅಧ್ಯಯನ ನಡೆಯುತ್ತಿತ್ತು. ಲೊಕ್ಕಿಗುಂಡಿ (ಲಕ್ಕುಂಡಿ) ಯಲ್ಲಿ ಪ್ರಭಾಕರ, ಪುಲಿಗೆರೆ (ಲಕ್ಷ್ಮೇಶ್ವರ)ಯ ಒಂದು ಶಾಲೆಯಲ್ಲಿ ವ್ಯಾಕರಣ, ಇನ್ನೊಂದರಲ್ಲಿ ಜ್ಯೋತಿಷ, ಖಗೋಳಶಾಸ್ತ್ರ ಇವುಗಳ ಉಚ್ಚ ಮಟ್ಟದ ಅಭ್ಯಾಸ ನಡೆಯುತ್ತಿತ್ತು. ಕೆಲವು ವಿದ್ಯಾಸಂಸ್ಥೆಗಳಲ್ಲಿ ಸಾಮಾನ್ಯ ವಿಷಯಗಳ ಜೊತೆಗೆ ಅಷ್ಟು ಸಾಮಾನ್ಯವಲ್ಲದ ವಿಷಯಗಳನ್ನು ಕಲಿಸುತ್ತಿದ್ದರು! ಬೆಳ್ಳಿಗಾವೆಯ ಕೇಶವಪುರ ಬ್ರಹ್ಮಪುರಿಯಲ್ಲಿ ನಾನಾ ಚಮತ್ಕಾರ 'ಭಂಗಿ'ಗಳನ್ನು ಕಲಿಸುತ್ತಿದ್ದರು.

ಕುಪ್ಪಟೂರಿನ ಮಹಾಜನರು ವಾತ್ಸ್ಯಾಯನನ ಕಾಮ-ಸೂತ್ರದ ಅಧ್ಯಯನವನ್ನು ಮಾಡಿದ್ದರು. ಅರಸೀಕೆರೆಯ ಮಹಾಜನರಿಗೆ ಕರ್ನಾಟ, ಲಾಳ, ದ್ರಾವಿಡ ಮತ್ತು ಇತರ ಭಾಷೆಗಳು ಬರುತ್ತಿದ್ದವಲ್ಲದೇ ಲಿಪಿಗಳೂ ಕೂಡ ಗೊತ್ತಿದ್ದವು. ನಾಗಾಯಿಯ ಒಂದು ಶಾಲೆಯಲ್ಲಿ ೧೦೦ ವಿದ್ಯಾರ್ಥಿಗಳು "ಟುಪ್ರ"ವನ್ನು ೧೦೦ ವಿದ್ಯಾರ್ಥಿಗಳು "ವ್ಯಾಸ"ವನ್ನು ೧೦೦ ವಿದ್ಯಾರ್ಥಿಗಳು "ಮನು"ವನ್ನು ಅಭ್ಯಸಿಸುತ್ತಿದ್ದರು. ಅದೇ ಸಂಸ್ಥೆಯಲ್ಲಿ ಇನ್ನು ೧೦೦ ವಿದ್ಯಾರ್ಥಿಗಳು ಇನ್ನೊಂದು ವಿಷಯವನ್ನು ಅಭ್ಯಸಿಸುತ್ತಿದ್ದರು. ಆದರೆ ಆ ಭಾಗದಲ್ಲಿ ಶಾಸನ ಒಡೆದು ಹೋಗಿರುವದರಿಂದ ವಿಷಯದ ಹೆಸರು ತಿಳಿಯುವ ಹಾಗಿಲ್ಲ. ಒಂದೊಂದು ವಿಷಯಕ್ಕೆ ಇಂತಿಷ್ಟು ವಿದ್ಯಾರ್ಥಿಗಳೆಂದು ನಿಷ್ಕರ್ಷಿಸಿರುವದರಿಂದ ಹೆಚ್ಚಿನ ವಿದ್ಯಾರ್ಥಿಗಳು ಆಯಾ ವಿಷಯಾಭ್ಯಾಸಕ್ಕೆ ಬರಲು ಬಯಸಿದರೆ ಅವರನ್ನು ಪರೀ

ತ್ತೆಸಿ ತಮಗೆ ಬೇಕಾದಷ್ಟು ಜನರನ್ನು ಮಾತ್ರ ತೆಗೆದುಕೊಳ್ಳು
ತ್ತಿದ್ದರೆಂಬುದು ಊಹೆಯ ವಿಷಯ. ಹೂಲಿಯ ಮಹಾಗ್ರಹಾರ
ದಲ್ಲಿ ಇತರ ಸಾಮಾನ್ಯ ವಿಷಯಗಳ ಜೊತೆಗೆ ವಾರ್ತಾ ಅಥವಾ
ಅರ್ಥಶಾಸ್ತ್ರದ ಉಲ್ಲೇಖವೂ ಇದೆ.

## ಅಭ್ಯಾಸ ಮತ್ತು ಪರೀಕ್ಷೆ

ಗುರುಗಳೂ, ವಿದ್ಯಾರ್ಥಿಗಳೂ ಜತೆಗೇ ಇರುತ್ತಿದ್ದುದರಿಂದ, ಗುರುಗಳಿಗೆ ವಿದ್ಯಾರ್ಥಿಗಳ ದೈನಂದಿನ ಪ್ರಗತಿಯು ಕಂಡು ಬರುತ್ತಿತ್ತು. ರಾಜರು ವಿದ್ವಾಂಸರಿಗೆ ಯೋಗ್ಯ ಸನ್ಮಾನ ಮನ್ನಣೆಗಳನ್ನು ಕೊಡಮಾಡುವಾಗ ಈ ರೀತಿಯಲ್ಲಿ ಪರೀಕ್ಷೆ ಮಾಡುತ್ತಿದ್ದರು.

"ನಾಗಶ್ರೀಯುಂ ಪ್ರಣಮುವನ್ನುಚ್ಚರಿಸಿ ಸ್ವರವರ್ಣ ಭೇದ ದಿಂದಂ ಪ್ರಥಮುಂ ಚತುಃಷಷ್ಟಿ ಸಂಗತಿಗಳು ಪದಕ್ರಮಾ ಭೇದದಿಂ ಬ್ರಾಹ್ಮಣ ಆರಣ ಸೂತ್ರಂ ಮೊದಲಾಗೊಡೆಯುಸ- ನೋದಿ ಋಗ್ಯಜುಸ್ಸಾಮಾಥರ್ವಣ ವೇದಂಗಳಂ, ಸ್ವರವರ್ಣ ಭೇದದಿಂದಂ ಮಂತ್ರ ಸಹಿತ ಪಾಳಿ ಪದಕ್ರಮ ಜಟಭೇದದಿಂದಂ ಕತಸೂತ್ರಂ ಮೊದಲಾಗೆಲ್ಲಮುಂ ಯಥಾಕ್ರಮದಿಂದ ಉಚ್ಚರಿಸಿ ಪದಿನೆಂಟು ಪುರಾಣಂಗಳುಂ ಪದಿನೆಂಟು ಧರ್ಮಸಂಗತಿಗಳುಂ ಮೀಮಾಂಸ ನ್ಯಾಯಸೂತ್ರಂ ಇವೆಲ್ಲಮನೋದಿ ಕ್ರಿಯಾಕಾರಕ ಸಂಬಂಧದಿಂದಂ ಎಲ್ಲಮುಂ ವಖ್ಯಾಣಿಸಿ ತೋರಿದೊಡೆ ಅರಸಂ ಮೊದಲಾಗಿ ನೆರೆದ ನೆರೆವಿಯುಂ ಪಂಡಿತರ್ಕಳೆಲ್ಲಂ ವಿಸ್ಮಯುಂ ಬಟ್ಟು"[೧] ಇತ್ಯಾದಿ.

---

೧. ವಡ್ಡಾರಾಧನೆ. ಸಂಪಾದಕರು ಡಿ. ಎಲ್. ನ. ಶಾರದಾ ಮಂದಿರ ಮೈಸೂರು ೧೯೫೫. ಪುಟ ೨೩.

## ಶಿಸ್ತು

ವಿದ್ಯಾ ಸಂಸ್ಥೆಗಳಲ್ಲಿ ಶಿಸ್ತಿಗೆ ಮಹತ್ವವನ್ನು ಕೊಟ್ಟಿದ್ದರು. ಎರಡು ಬಗೆಯ ಶಿಸ್ತನ್ನು ನಾವಿಲ್ಲಿ ಕಾಣಬಹುದಾಗಿದೆ. ಮೊದಲನೆಯದು: ಅಭ್ಯಾಸ ಕ್ರಮದಲ್ಲಿ ಹೆಚ್ಚು ಕಡಿಮೆ ಯಾಗದಂತೆ ನೋಡಿಕೊಳ್ಳುವದು.

ಇನ್ನೊಂದು, ಬ್ರಹ್ಮಚರ್ಯವನ್ನು ಕಾಪಾಡಿಕೊಳ್ಳುವದು. ಮೊದಲನೆಯ ಪ್ರಕಾರದಲ್ಲಿ ಅಭ್ಯಾಸವನ್ನು ದುರ್ಲಕ್ಷ ಮಾಡು ತ್ತಿದ್ದ ವಿದ್ಯಾರ್ಥಿಗಳನ್ನು ಮಠದಿಂದ ಹೊರಗೆ ಕಳಿಸುತ್ತಿದ್ದರು. ಎರಡನೆಯ ಪ್ರಕಾರದಲ್ಲಿ ಊರಿನವರಾಗಲಿ ಅಧಿಕಾರಿಗಳಾಗಲಿ ಈ ವಿಷಯದಲ್ಲಿ ವಿದ್ಯಾರ್ಥಿಗಳಲ್ಲಿ ಮುಖ್ಯವಾಗಿ ತಪೋಧನರಲ್ಲಿ ಈ ನ್ಯೂನತೆ ಕಂಡು ಬಂದರೆ ತಪ್ಪಿತಸ್ಥರನ್ನು ಶಿಕ್ಷಿಸುತ್ತಿದ್ದರು.

## ಸ್ತ್ರೀ ಶಿಕ್ಷಣ

ಸಾಮಾನ್ಯ ಶಿಕ್ಷಣ ಪದ್ಧತಿಯಬಗ್ಗೆ ತಿಳಿದುಕೊಂಡನಂತರ ವಿಶಿಷ್ಟ ರೀತಿಯ ಶಿಕ್ಷಣ ಕ್ರಮಗಳ ಬಗ್ಗೆ ಅಂದರೆ ಸ್ತ್ರೀ ಶಿಕ್ಷಣ, ವೃತ್ತಿ ಶಿಕ್ಷಣ, ಶಾರೀರಿಕ ಶಿಕ್ಷಣ ಮುಂತಾದವುಗಳ ಬಗ್ಗೆ ನೋಡಬಹುದು. ಸ್ತ್ರೀ ಶಿಕ್ಷಣ ಪದ್ಧತಿಯಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿರುವದಿಲ್ಲ. ಆದರೆ ಹಲವಾರು ಸುಶಿಕ್ಷಿತ ಸ್ತ್ರೀಯರ ಉದಾಹರಣೆಗಳು ದೊರೆಯುತ್ತವೆ. ಇವರಿಗಾಗಿ ಪ್ರತ್ಯೇಕ ಶಾಲೆಗಳ ಉಲ್ಲೇಖ ಕಂಡು ಬರದ್ದರಿಂದ ಸ್ತ್ರೀಶಿಕ್ಷಣವು ಹೆಚ್ಚಾಗಿ ಮನೆಯಲ್ಲಿಯೇ ನಡೆಯುತ್ತಿತ್ತು ಎಂದು ಹೇಳ ಬಹುದು. ಈ ಶಿಕ್ಷಣ ಯಾವ ರೀತಿ ನಡೆಯುತ್ತಿತ್ತು ಎನ್ನುವ

ದಕ್ಕೆ ಪಂಪನು ಆದಿಪುರಾಣದಲ್ಲಿ ಬರೆದ ಒಂದು ಘಟನೆಯನ್ನು ಉದಾಹರಿಸಬಹುದು.

ಒಂದು ದಿನ ಆದಿನಾಥನಿಗೆ ಮಕ್ಕಳು ಬಂದು ನಮಸ್ಕಾರ ಮಾಡಿ ನಿಂತಿರಲು, ಅವರನ್ನು ನೋಡಿ ಇವರಿಗೆ ಈಗ ವಿದ್ಯಾಭ್ಯಾಸ ಮಾಡಿಸುವ ವಯಸ್ಸು ಪ್ರಾಪ್ತವಾಯಿತು ಎಂದು ತಿಳಿದುಕೊಂಡು, ವಿಸ್ತಾರವಾದ ಹೇಮಪೀಠದಂತೆ ಇರುವ ತನ್ನ ಹೃತ್ಕಮಲದಲ್ಲಿರುವ ಸರಸ್ವತಿ ದೇವಿಯನ್ನು ಪ್ರತಿಷ್ಠಿಸಿ, ಪೂಜೆಮಾಡಿ, ತನ್ನ ಇಬ್ಬರೂ ಹೆಣ್ಣುಮಕ್ಕಳನ್ನು (ಬ್ರಾಹ್ಮಿ,ಸೌಂದರಿ) ಸಮೀಪದಲ್ಲಿ ಕುಳ್ಳಿರಿಸಿಕೊಂಡು, ತ್ರಿಲೋಕ ಗುರುವಾದ ಆದಿನಾಥನು ಹಿರಿಯಳಾದ ಬ್ರಾಹ್ಮಿಗೆ, ಮಂಗಳ ಪ್ರದಪದವಾದ ಸಿದ್ಧಂ ನಮಃ ಎಂಬ ಮುಖ್ಯ ಅಕ್ಷರಗಳನ್ನು, ಬರೆದು ತಿಳಿಸಿ, ನಂತರ ಉಳಿದ ಅಕಾರಾದಿಯಾಗಿ ಹಕಾರಾಂತವಾದ ಅಕ್ಷರಗಳನ್ನು, ಅವುಗಳಲ್ಲಿ ಸ್ವರ, ಅನುಸ್ವಾರ, ವಿಸರ್ಗ, ವ್ಯಂಜನ, ಯೋಗವಾಹ ಚತುಷ್ಟಾಕ್ಷರ, ಸಂಯುಕ್ತಾಕ್ಷರಗಳನ್ನು ದಕ್ಷಿಣ (ಬಲ) ಹಸ್ತದಿಂದ ಬರೆದು ಉಪದೇಶ ಮಾಡಿದನು.

ನಂತರ, ಭವ್ಯ ಜನಂಗಳಿಗೆ ಆನಂದದಾಯಕನಾದ ಪುರುದೇವನು ಆಗ ಅರಳಿದ ಇಂದೀವರ ದಳದಂತೆ ಇರುವ ಕಣ್ಣುಗಳುಳ್ಳ ಎರಡನೆಯ ಮಗಳಾದ ಸುಂದರಿ (ಸೌಂದರಿ)ಗೆ ಗಣಿತವನ್ನು(ಲೆಕ್ಕವನ್ನು) ಅಂಕಿ, ಸ್ಥಾನ ಮೊದಲಾದವನ್ನು ಕ್ರಮವಾಗಿ ತನ್ನ ಎಡದ ಕೈಯಿಂದ ಬರೆದು ತೋರಿಸಿ ಉಪದೇಶಿಸಿದನು.

ಆ ನಂತರ ಆದಿಬ್ರಹ್ಮನು ಆ ಈರ್ವರಿಗೂ ಸ್ವಯಂಭುವಾಭಿಧಾನಪದ ಮುಕ್ತಿಗೆ ಕಾರಣೀಭೂತವಾದ ತನ್ನ ವಿದ್ಯೆ

ಯಲ್ಲಿ ಛಂದಸ್ಸು 'ವಿಚಿತಿ' ಅಲಂಕಾರ ಶಾಸ್ತ್ರಗಳಿಂದ ಯುಕ್ತ ವಾದ ಪಾಡ್ಯಯಲ್ಲಿ ಅಲ್ಲದೇ ಸಮಸ್ತ ಕಲೆಗಳಲ್ಲಿಯೂ ಅವ ರನ್ನು ವಿದ್ಯಾಪರಿಣತೆಯರನ್ನಾಗಿ ಮಾಡಿದನು.

ಇದೇ ಗ್ರಂಥದಲ್ಲಿ ಇನ್ನೊಂದು ಕಡೆ ಪಂಪನು ಸ್ತ್ರೀಶಿಕ್ಷಣದ ಆವಶ್ಯಕತೆಯ ಬಗೆಗೆ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೀಗೆ ಹೇಳುತ್ತಾನೆ. "ಸ್ತ್ರೀಯರಿಗೆ ಶೀಲ ಮತ್ತು ವಿನಯ ಗುಣದೊಡನೆ ವಿದ್ಯೆಯು ಪರಮಾವಶ್ಯಕ. ಇದರಿಂದಲೇ ಅವರು ಜಗತ್ಪಾ ವನೆಯರಾಗುತ್ತಾರೆ." ಹೀಗೆ ಕನ್ನಡದ ಶ್ರೇಷ್ಠಕವಿ ತನ್ನ ಮತ ವನ್ನು ವ್ಯಕ್ತಮಾಡಿರುವದರಿಂದ ಆ ಕಾಲದಲ್ಲಿ ಸ್ತ್ರೀ ಶಿಕ್ಷಣದ ಮಹತ್ವ ತಿಳಿದಿರಲಿಲ್ಲವೆನ್ನುವ ಹಾಗಿಲ್ಲ.

ಸಾಮಾನ್ಯ ವರ್ಗದ ಸ್ತ್ರೀಯರು ಸುಶಿಕ್ಷಿತರಾಗಿದ್ದ ಉದಾ ಹರಣೆಗಳು ಶಾಸನಗಳಲ್ಲಿ ದೊರಕುವದೇ ಕಷ್ಟ. ರಾಜಮನೆ ತನದ ಸುಶಿಕ್ಷಿತ ಸ್ತ್ರೀಯರ ಉದಾಹರಣೆಗಳು ಅನೇಕವಿವೆ. ಅರಸನೆಯ ವಿಕ್ರಮಾದಿತ್ಯನ ಅರಸಿ ಪಿರಿಯ ಕೇತಲದೇವಿಯು ಒಳ್ಳೆಯ ವಿದುಷಿಯೆಂದೂ,ಅನೇಕ ಭಾಷಾ ಪಾರಂಗತೆಯೆಂದೂ ಅಭಿನವ ಸರಸ್ವತಿಯೆಂದೂ ಪ್ರಸಿದ್ಧಳಿದ್ದಳು. ಆತನ ಇನ್ನೊಬ್ಬ ರಾಣಿಯಾದ ಚಂದಲದೇವಿಯು ಸರಸ್ವತಿಯ ಅವತಾರವೆಂದೂ, ನೃತ್ಯದಲ್ಲಿ ವಿದ್ಯಾಧರಿಯೆಂದೂ ಎಲ್ಲಾ ವಿದ್ಯೆ,ಕಲೆಗಳಲ್ಲಿ ಪ್ರವೀಣ ಳೆಂದೂ ಖ್ಯಾತಿಯನ್ನು ಗಳಿಸಿದ್ದಳು. ಈ ರಾಜ ಕನ್ಯೆಯರು ನೃತ್ಯಕ್ಕೆ ವಿಶೇಷ ಮಹತ್ವವನ್ನು ಕೊಡುತ್ತಿದ್ದುದರಿಂದ ಅವರ ದೇಹವು ಸುಗಠಿತವಾಗಿರುತ್ತಿತ್ತು. ಶ್ರೀಕರಣ ಮಾಜಿರಾಜನ ಹೆಂಡತಿ ಶಾಂತಳಾದೇವಿಯ ಅಂಗದಲ್ಲಿ ಯಾವತರದ ನ್ಯೂನ ತೆಯೂ ಇದ್ದಿಲ್ಲವಂತೆ. ಕಲಚೂರಿಯ ಸೋವಿದೇವನ ಹೆಂಡತಿ

ಸಾವಲದೇವಿ ಎಲ್ಲ ಲಲಿತ ಕಲೆಗಳಲ್ಲಿ ನಿಷ್ಣಾತಳಾಗಿದ್ದಳಲ್ಲದೇ, ಪಂಡಿತರ ಸಭೆಯಲ್ಲಿ ತನ್ನ ನೃತ್ಯ ಪ್ರದರ್ಶನ ಮಾಡಿ, ತನ್ನ ಪತಿಯನ್ನೂ ಅನೇಕ ದೇಶಗಳಿಂದ ಬಂದ ನಾಟ್ಯ ಕಲಾಭಿಜ್ಞರನ್ನೂ ಸಂತೋಷ ಪಡಿಸಿದಳು. ತ್ರಿಭುವನಮಲ್ಲ–ಮಲ್ಲಿದೇವ–ಚೋಳ ಮಹಾರಾಜನ ರಾಣಿ ಲಕ್ಷ್ಮೀದೇವಿ ತನ್ನ ಪತಿಯೊಡನೆ ರಾಜ್ಯ ಕಾರಭಾರ ಮಾಡುತ್ತಿದ್ದಳಲ್ಲದೇ ಕಾವ್ಯ ಶಾಸ್ತ್ರದಲ್ಲಿ, ಇತರ ಕಲೆ, ಶಾಸ್ತ್ರಗಳಲ್ಲಿ ವಾದ್ಯವಾದನದಲ್ಲಿ, ನರ್ತನದಲ್ಲಿ ಪರಿಣತೆಯಿದ್ದಳು. ಚಾಲುಕ್ಯರ ಕಾಲದಲ್ಲಿ ಬೇರೆ ಬೇರೆ ಪ್ರದೇಶಗಳನ್ನು ರಾಜ ಮನೆತನದ ಸ್ತ್ರೀಯರು ಆಳುತ್ತಿದ್ದ ಉದಾಹರಣೆಗಳು ಅನೇಕವಿವೆ.

ದೇವಸ್ಥಾನಗಳಲ್ಲಿ ದೇವರ ಸೇವೆಗಳಲ್ಲಿ ನೃತ್ಯ, ಸಂಗೀತ ಸೇವೆಗಳೂ ಇರುತ್ತಿದ್ದವು. ಈ ಸೇವೆಗಳನ್ನೆಲ್ಲ ದೇವದಾಸಿಯರು ಸಲ್ಲಿಸುತ್ತಿದ್ದರು. ಇವರೆಲ್ಲ ನೃತ್ಯ ಸಂಗೀತಗಳಲ್ಲಿ ಪರಿಣತರಿರುತ್ತಿದ್ದರು.

## ಶ್ರೇಣಿಗಳು (ತಾಂತ್ರಿಕ ಶಿಕ್ಷಣ)

ಪಟ್ಟದಕಲ್ಲಿನ ಶಾಸನಗಳಿಂದ ಅಲ್ಲಿಯ ದೇವಸ್ಥಾನಗಳನ್ನು ಕಟ್ಟಿದವರು ಬೇರೆ ಬೇರೆ ಸಂಘದ ಅಥವಾ ಶ್ರೇಣಿಯ ಸದಸ್ಯರೆಂದು ತಿಳಿಯುತ್ತದೆ. ಈ ಸದಸ್ಯರಲ್ಲಿ ವಾಸ್ತು ಶಿಲ್ಪ ಮತ್ತು ಶಿಲ್ಪ ಶಾಸ್ತ್ರಗಳ ಕಲೆಗಳು ಪರಂಪರಾಗತವಾಗಿ ಬಂದಿರುತ್ತಿದ್ದವು. ಇವತ್ತಿಗೂ ಈ ಕಲೆಯ ಕೆಲವು ಅಂಶಗಳು ಕರ್ನಾಟಕದ ಮಲೆನಾಡಿನಲ್ಲಿ ಮತ್ತು ಕಡಲತೀರದ ಪ್ರದೇಶದ ಗುಡಿಕಾರರಲ್ಲಿ ಉಳಿದು ಬಂದಿದೆ. ಈ ಶಿಲ್ಪಿಗಳಲ್ಲಿ ಆಗಮದಲ್ಲಿ ಹೇಳಿದ ರೀತಿಯಲ್ಲಿ ತಮ್ಮ ಕೆಲಸವನ್ನು ಮಾಡುತ್ತಿದ್ದರು. ಇವರಲ್ಲಿ ಕೆಲವರು ವಿಶ್ವಕರ್ಮ ಗುಂಪಿಗೆ ಸೇರಿದವರಿದ್ದರು.

ಇದೇ ರೀತಿಯಾದ ಶ್ರೇಣಿಗರು ವ್ಯಾಪಾರ ವ್ಯವಹಾರಗಳನ್ನು ಕರ್ನಾಟಕದಲ್ಲಿ ಮತ್ತು ಇತರ ಪ್ರಾಂತಗಳಲ್ಲಿ ನಿರ್ವಹಿಸುತ್ತಿದ್ದರು. ಆದಯ್ಯನ ರಗಳೆಯಲ್ಲಿ ಶಿವಶರಣ ಆದಯ್ಯನಿಗೆ ಆತನ ತಂದೆಯು ವ್ಯವಹಾರವನ್ನು, ವಿದೇಶಗಳಲ್ಲಿ ಪ್ರವಾಸ ಮಾಡುವ ರೀತಿಯನ್ನು, ಲೆಕ್ಕವಿಡುವ ರೀತಿಯನ್ನು, ಗಣಿತವನ್ನು ಕಲಿಸಿದನೆಂದು ಹೇಳಿದೆ.

## ಶಾರೀರಿಕ ಶಿಕ್ಷಣ

ಅಂಗಸಾಧನೆ ಮತ್ತು ಆಟಗಳಿಗೂ ಮಹತ್ವವಿತ್ತು. ಗಂಗ ರಾಜಕುಮಾರ ತ್ರಿಂಬಕನು ಸಾಧನೆಯಿಂದ ತನ್ನ ಅಂಗಗಳನ್ನು ದುಂಡುದುಂಡಾಗಿಯೂ, ದಪ್ಪಗಾಗಿಯೂ, ಗಟ್ಟಿಯಾಗಿಯೂ ಮಾಡಿಕೊಂಡಿದ್ದನಂತೆ. ' ಮಾನಸೋಲ್ಲಾಸ ' ದಲ್ಲಿ ಅಂಗ ಸಾಧನೆಯ ಉದ್ದೇಶವು ಸ್ವಲ್ಪ ಬೇರೆಯಾಗಿತ್ತೆಂದು ಕಂಡು ಬರುತ್ತದೆ. ಅಂಗಾಂಗಗಳನ್ನು ಮೃದುವಾಗಿ ಬೇಕಾದ ಹಾಗೆ ಬಗ್ಗಿಸಲು ಬರುವಂತೆ ಮತ್ತು ಎಂಥ ಶ್ರಮವನ್ನಾದರೂ ಸಹಿಸಲು ಯೋಗ್ಯವಾಗುವಂತೆ ಮಾಡುವದು ಅಂಗಸಾಧನೆಯ ಉದ್ದೇಶವಾಗಿದೆಯೆಂದು ಅದರಲ್ಲಿ ಹೇಳಲಾಗಿದೆ. ಇದೇ ಗ್ರಂಥದಲ್ಲಿ ಅನೇಕ ಆಟ, ಪಂದ್ಯಾಟಗಳ ಬಗ್ಗೆ ಉಲ್ಲೇಖವಿದೆ. ಆನೆಗಳಿಗೂ, ಮನುಷ್ಯರಿಗೂ ಓಟದಲ್ಲಿ ಸ್ಪರ್ಧೆ, ಮಲ್ಲಯುದ್ಧ, ಬಾಕ್ಸಿಂಗ್, ಚೆಂಡಾಟ, ಕುದುರೆಯ ಚೆಂಡಾಟ (ಪೋಲೋ) ಇವುಗಳ ವರ್ಣನೆಯಿದೆ. ಇಂಥ ಆಟಗಳು ಜರುಗುವದಕ್ಕೆ ಮತ್ತು ಪ್ರೇಕ್ಷಕರು ಬಂದು ಕೂಡ್ರುವದಕ್ಕೆ ವೈಹಾಳಿಗಳನ್ನೂ, ಕ್ರೀಡಾ ಮಂದಿರಗಳನ್ನೂ ಕಟ್ಟಿಸಬೇಕೆಂದು ಮಾನಸೋಲ್ಲಾಸದಲ್ಲಿ ಹೇಳಿದೆ. ಈ ಆಟಗಳಲ್ಲಿ ಅತ್ಯಂತ ಜನಪ್ರಿಯವಾದ

ಕುಸ್ತಿಗಳನ್ನು ಏರ್ಪಡಿಸಲಿಕ್ಕೆ ಮತ್ತು ಜಟ್ಟಿಗಳನ್ನು ತರಬೇತು ಗೊಳಿಸಲಿಕ್ಕೆ ಆಡಳಿತ ಸರಕಾರದಲ್ಲಿ ಒಂದು ವಿಶಿಷ್ಟ ಖಾತೆಯೇ ಇರಬೇಕೆಂದು ಆ ಗ್ರಂಥದಲ್ಲಿ ಹೇಳಲಾಗಿದೆ.ಆಟದಲ್ಲಿ ಗೆದ್ದವರಿಗೆ ರಾಜನು ಬಹುಮಾನವನ್ನು ಕೊಡಬೇಕೆಂದೂ, ಆಟಗಳಿಗಾಗಿ ತರಬೇತಿ ಹೊಂದುವ ಶ್ರೇಷ್ಟ ದರ್ಜೆಯ ಕ್ರೀಡಾಪಟುಗಳಿಗೆ ಎಲ್ಲ ತರದ ಸೌಕರ್ಯಗಳನ್ನು ಒದಗಿಸಬೇಕೆಂದೂ ಉಲ್ಲೇಖವಿದೆ.

ಶ್ರವಣಬೆಳಗೊಳದ ಕ್ರಿ. ಶ. ೯೭೨ರ ಒಂದು ಶಾಸನವು ವಿಚಿತ್ರವಾದ ಚೆಂಡಾಟವನ್ನು ವರ್ಣಿಸುತ್ತದೆ. ಈ ಆಟದಲ್ಲಿ ರಾಷ್ಟ್ರಕೂಟರ (ನಾಲ್ಕನೆಯ) ಇಂದ್ರರಾಜನು ನಿಷ್ಣಾತ ನಿದ್ದನು. ಈ ಆಟದ ವರ್ಣನೆಯು ಸ್ವಲ್ಪಮಟ್ಟಿಗೆ ಈಗಿನ ಗಾಲ್ಫ್ ಆಟವನ್ನು ಹೋಲುತ್ತದೆ. ಮುಖ್ಯ ವ್ಯತ್ಯಾಸವೆಂದರೆ ಈ ಆಟವನ್ನು ಕುದುರೆಯ ಮೇಲೆ ಕುಳಿತು ಆಡುತ್ತಿದ್ದರು. ಈಗ ಈ ಆಟದ ಬಗ್ಗೆ ಕುದುರೆಯನ್ನು ಉಪಯೋಗಿಸುವದಿಲ್ಲ. ಈ ಆಟದಲ್ಲಿ ಬರುವ ಹೊಡೆತಗಳಿಗೆ ಸುಕರ, ದುಷ್ಕರ, ವಿಷಮ ಮತ್ತು ವಿಷಮ ದುಷ್ಕರಗಳೆನ್ನುತ್ತಿದ್ದರು. ಚೆಂಡಿಗೆ ಗಿರಿಗೆ ಯೆನ್ನುತ್ತಿದ್ದರು. ಅದನ್ನು ಹೊಡೆಯುವದು ಕೋಲಿನಿಂದ. ಆಟಕ್ಕೆ ಸಂಬಂಧಿಸಿದ ಸರ್ವತೋಭದ್ರ, ಉದ್ದವಳ ಚಕ್ರವ್ಯೂಹ ಮುಂತಾದ ಶಬ್ದಗಳು ಈ ಶಾಸನದಲ್ಲಿ ಬರುತ್ತವೆ. ಚೆಂಡನ್ನು ಒಂದು ವಲಯದ ಸುತ್ತಲೂ ಅನೇಕ ಸಲ ತೆಗೆದುಕೊಂಡು ಹೋಗುವದೇ ಈ ಆಟದ ಉದ್ದೇಶವಿತ್ತೆಂದು ತೋರುತ್ತದೆ. ಇಂದ್ರರಾಜನು ಈ ಆಟದಲ್ಲಿ ಎಷ್ಟು ಚತುರನಿದ್ದನೆಂದರೆ ಅವ ನಿಗೆ ೩೩೪ ಪ್ರಕಾರದ ಎಸೆತಗಳು(Strokes) ಗೊತ್ತಿದ್ದವಂತೆ, ಮತ್ತು ಲೀಲಾಜಾಲವಾಗಿ ಇವುಗಳನ್ನು ಪ್ರಯೋಗಿಸಬಲ್ಲವ

ನಾಗಿದ್ದನಂತೆ. ಅಲ್ಲದೇ ಎಂಥ ಕುದುರೆ, ಕೋಲು, ಚೆಂಡು ಇದ್ದರೂ ವಲಯವನ್ನು ಎಂಟು, ಹತ್ತು ಸಲ ಸುತ್ತಿಸಲಿಕ್ಕೆ ಸಮರ್ಥನಾಗಿದ್ದನಂತೆ. ಇತರರು ಅಂಥ ಸಂದರ್ಭದಲ್ಲಿ ( ಕುದುರೆ, ಕೋಲು, ಗಿರಿಗೆ ಸರಿಯಾಗಿಲ್ಲದಿದ್ದರೆ) ಆಡುವ ಯತ್ನವನ್ನೇ ಮಾಡುತ್ತಿರಲಿಲ್ಲವಂತೆ. ಈ ಆಟದಲ್ಲಿ ಉಪಯೋಗಿಸಿದಂಥ ಕನ್ನಡ ಶಬ್ದಗಳನ್ನು (ಕೋಲು, ಗಿರಿಗೆ, ಎಳೆಪ, ಉದ್ದವಳ) ನೋಡಿದರೆ ಈ ಆಟ ಪ್ರಸಿದ್ಧವಾಗಲಿಕ್ಕೆ ಈ ಪ್ರಾಂತದ ಜನ ಸಾಕಷ್ಟು ಶ್ರಮಿಸಿದರೆಂದು ಅನಿಸುತ್ತದೆ. ಮತ್ತು ಈ ಆಟವು ಈಗಿನ ಗಾಲ್ಫ ಆಟದ ಮೂಲವಾಗಿದ್ದರೆ ಆ ಆಟದ ಇತಿಹಾಸವು ೪೦೦–೫೦೦ ವರ್ಷಗಳ ಹಿಂದೆ ಹೋಗುತ್ತದೆ. ಈಗ ತಿಳಿದ ಪ್ರಕಾರ ಗಾಲ್ಫ ಆಟವನ್ನು ೧೫ನೇ ಶತಮಾನದಲ್ಲಿ ಸ್ಕಾಟಲಂಡಿನಲ್ಲಿ ಮೊದಲ ಸಲ ಆಡಿದರಂತೆ.

ಮೇಲೆ ಹೇಳಿದ ಚೆಂಡಾಟಗಳೆಲ್ಲಾ ರಾಜಕುಮಾರರಿಗೆ ಮಾತ್ರ ಸಾಧ್ಯವಿದ್ದವು. ವಿದ್ವಾಂಸರಿಗೆ ಅವು ದೂರವಿದ್ದವು. ಇತ್ಸಿಂಗನು ಹೇಳಿದ ಪ್ರಕಾರ ಶತಪಥವೇ ಅವರಿಗೆ ಮುಖ್ಯ ವ್ಯಾಯಾಮವಾಗಿತ್ತು ! ಮತ್ತು ಶಾಸನಗಳಲ್ಲಿ ಹೇಳಿದಂತೆ ಯೋಗಾಸನ ಮತ್ತು ಪ್ರಾಣಾಯಾಮಗಳು ಇವರ ಆರೋಗ್ಯವನ್ನು ಕಾಪಾಡುತ್ತಿದ್ದವು.

## ಲೋಕಶಿಕ್ಷಣ

ದೇವಸ್ಥಾನಗಳು ಲೋಕ ಶಿಕ್ಷಣದ ( mass education) ಪ್ರಮುಖ ಕೇಂದ್ರಗಳಾಗಿದ್ದವು. ಇವುಗಳಲ್ಲಿ ಪುರಾಣ ಭಟ್ಟನು ಸಂಜೆಯ ಕೆಲವು ಗಳಿಗೆಗಳ ತನಕ ಮಹಾಭಾರತ

ರಾಮಾಯಣ ಓದುತ್ತಿದ್ದನು. ದೇವಸ್ಥಾನಗಳ ಗೋಡೆಗಳ ಮೇಲೆ ಇವುಗಳಲ್ಲಿಯ ಕತೆಗಳನ್ನು ಚಿತ್ರದಲ್ಲಿ ಕೊರೆಯುತ್ತಿದ್ದರು. ಈ ಚಿತ್ರಗಳನ್ನು ನೋಡುವದರಿಂದಲೂ, ಕತೆಗಳನ್ನು ಕೇಳುವದರಿಂದಲೂ ಆ ಕತೆಗಳೆಲ್ಲ ಮನೆ ಮಾತಾಗಿರುತ್ತಿದ್ದವು. ಇವರ ಜೊತೆಗೆ ದೇವಸ್ಥಾನದಲ್ಲಿ ನಡೆಯುತ್ತಿದ್ದ ನೃತ್ಯ, ಸಂಗೀತ, ನಾಟಕಗಳು ಜನರಿಗೆ ಮನರಂಜನೆ ಒದಗಿಸುತ್ತಿದ್ದವು. ಇವುಗಳ ಪ್ರಯೋಗಗಳಿಗೆಂದು ದೇವಸ್ಥಾನದ ಆವಾರದಲ್ಲಿಯೇ ನಾಟಕ ಶಾಲೆಗಳನ್ನು ಕಟ್ಟಿಸುತ್ತಿದ್ದರು. ಹಾವೇರಿಯ ಸಿದ್ಧೇಶ್ವರ ದೇವಾಲಯ, ನಾಗಾಯಿಯ ಮಧುಸೂದನ ದೇವಾಲಯ ಮತ್ತು ಮುಗದದ ದೇವಾಲಯಗಳ ಆವಾರದಲ್ಲಿ ನಾಟಕ ಶಾಲೆಗಳಿದ್ದವೆಂದು ಶಾಸನಗಳು ಹೇಳುತ್ತವೆ.

## ವೀರಶೈವ ಆಂದೋಲನ

ವೀರಶೈವ ಮತದಿಂದ ೧೧ ನೇ ಮತ್ತು ೧೨ ನೇ ಶತಮಾನಗಳಿಂದ ಕರ್ನಾಟಕದಲ್ಲಿ ಮತ್ತು ಅದರ ನೆರೆಹೊರೆಯ ಪ್ರಾಂತಗಳಲ್ಲಿ ಲೋಕ ಶಿಕ್ಷಣಕ್ಕೆ ಬೆಂಬಲ ದೊರೆಯಿತು. ಇದರ ಪ್ರಮುಖರು ಎಲ್ಲರಿಗೂ ತಿಳಿಯುವಂತೆ ಕನ್ನಡದಲ್ಲಿ ಅದರಲ್ಲಿಯೂ ಸುಲಭ ಶೈಲಿಯಲ್ಲಿ ಬರೆದರು. ವಚನಗಳು ಗಹನವಾದ ತತ್ವಗಳನ್ನು ಕೂಡ ಅತ್ಯಂತ ಉದ್ಬೋಧಕವಾದ ರೀತಿಯಲ್ಲಿ ಸಾಮಾನ್ಯ ಜನರಿಗೆ ತಿಳಿಸಿ ಹೇಳುತ್ತವೆ. ಅನೇಕ ವಚನಕಾರರು ಸಮಾಜದಲ್ಲಿ ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿದವರ ಕುಲಕ್ಕೆ ಸೇರಿದವರಾದ್ದರಿಂದ ಅವರ ಕೃತಿಗಳೆಲ್ಲ ಬಹು ಜನ ವರ್ಗಗಳಿಗೆ ಸಹಜವಾಗಿಯೇ ಇಷ್ಟವಾದವು.

ವಚನಗಳಲ್ಲದೇ ವೀರಶೈವ ಮಠಗಳೂ ಈ ಲೋಕ ಶಿಕ್ಷಣ ಪ್ರಚಾರ ಕಾರ್ಯವನ್ನು ಮಾಡಿದವು. ಹಿಂದೆ ಕಾಳಾಮುಖರ

ವಶದಲ್ಲಿದ್ದ ಮಠಗಳು ಸಾವಕಾಶವಾಗಿ ವೀರಶೈವರ ಕೈಯೊಳಗೆ ಬಂದವು. ಬಳ್ಳಿಗಾವೆ ಮತ್ತು ಹೂಲಿಗಳ ಮಠಗಳೇ ಇದಕ್ಕೆ ಸಾಕ್ಷಿಯಾಗಿವೆ. ಕಾಳಾಮುಖ ಮಠಗಳಲ್ಲಿ ಹಿಂದೆ ಉಚ್ಚ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದ್ದರೆ ೧೩ ನೇ ಶತಮಾನದಿಂದ ಮುಂದೆ ವೀರಶೈವ ಮಠಗಳಲ್ಲಿ ಅದರ ಜೊತೆಗೆ ಪ್ರಾಥಮಿಕ ಮತ್ತು ವೃತ್ತಿ ಶಿಕ್ಷಣಗಳಿಗೂ ಹೆಚ್ಚಾಗಿ ಅವಕಾಶ ದೊರೆಯಿತು. ವೀರಶೈವ ಮಠಗಳು ಹಳ್ಳಿ ಹಳ್ಳಿಗಳಲ್ಲಿ ಸ್ಥಾಪನೆಯಾದ್ದರಿಂದ ವಿದ್ಯಾ ಪ್ರಸಾರವು ಮೊದಲಿಗಿಂತ ಹೆಚ್ಚಾಯಿತು.

ವೀರಶೈವ ಮಠಗಳಲ್ಲಿ ಮುಖ್ಯವಾಗಿ ಮೂರು ವಿಧ. ಓದಿಸುವ ಮಠ, ಸಾಲಿಮಠ ಮತ್ತು ವಿರಕ್ತಮಠ. ಮೊದಲಿನ ಎರಡು ಮಠಗಳಲ್ಲಿ ಓದು ಬರೆಹಗಳನ್ನು ಕಲಿಸುತ್ತಿದ್ದರೆ ಎರಡನೆಯದರಲ್ಲಿ ಇವುಗಳ ಜೊತೆಗೆ ವೃತ್ತಿಗಳಿಗೂ ಸ್ಥಾನವಿತ್ತು. ಈ ವೃತ್ತಿಗಳಲ್ಲಿ ನೂಲುವದು, ನೇಯುವದು, ಒಕ್ಕಲುತನ ಮತ್ತು ವೈದ್ಯಕೀಯ ಶಾಸ್ತ್ರಗಳು ಸೇರಿದ್ದವು. ಇವೆರಡರಲ್ಲಿ ಶಿಕ್ಷಣ ಮುಗಿಸಿದವನಿಗೆ ವಿರಕ್ತಮಠಗಳಲ್ಲಿ ಪ್ರವೇಶವಿತ್ತು. ಈ ಎಲ್ಲಾ ಬೆಳವಣಿಗೆಗಳು ಕಾಲ ಕ್ರಮೇಣ ಆದವು.

ಹೀಗೆ ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಶಿಕ್ಷಣ ಪ್ರಸಾರದಲ್ಲಿ ಮಹತ್ವದ ಕ್ರಾಂತಿಗೆ ನಾಂದಿ ಆಯಿತೆಂದು ಹೇಳಬಹುದು. ಇದರ ಪರಿಣಾಮವಾಗಿ ಮಾತೃಭಾಷೆಯಲ್ಲಿ ಶಿಕ್ಷಣ, ವೃತ್ತಿಗಳಿಗೆ ಪ್ರಾಶಸ್ತ್ಯ, ಸಮಾಜದಲ್ಲಿ ಸಮಾನತೆ, ನೀತಿಬೋಧೆ ಇವುಗಳಿಗೆ ಪುರಸ್ಕಾರವು ವಿದ್ಯಾಭ್ಯಾಸ ಪದ್ಧತಿಯಲ್ಲಿ ಹೆಚ್ಚಿತು.

# ಅನುಬಂಧಗಳು

ಪ್ರಾಚೀನ ಕರ್ನಾಟಕದ ಉಚ್ಚ ಶಿಕ್ಷಣ ಸಂಸ್ಥೆಗಳನ್ನು ಸಾಲೆ, ಮಠ, ಅಗ್ರಹಾರ, ಘಟಿಕೆ, ಎಂದು ಬೇರೆ ಬೇರೆ ಹೆಸರಿನಿಂದ ಕರೆದರೂ ಅವು ಗಳಲ್ಲಿ ಶಿಕ್ಷಣ ಪದ್ಧತಿ ಬಹುಮಟ್ಟಿಗೆ ಒಂದೇ. ಇವನ್ನು ತೋರಿಸುವ ಉದ್ದೇಶದಿಂದ ಒಂದು ಸಾಲೆ (ಅನುಬಂಧ ೧) ಒಂದು ಮಠ (ಅನುಬಂಧ ೨) ಒಂದು ಅಗ್ರಹಾರ (ಅನುಬಂಧ ೩) ಇವುಗಳ ಬಗ್ಗೆ ಹಿಂದೆ ಹೇಳಿದುದಕ್ಕಿಂತ ಹೆಚ್ಚಿನ ವಿವರಗಳನ್ನು ಕೊಡಲಾಗಿದೆ. ನಾಗಾಯಿಯ ಘಟಿಕೆಯ ಬಗ್ಗೆ ಈಗಾಗಲೇ ಪೂರೈಸಿದ ವಿವರಗಳನ್ನು ಮೂಲ ಶಾಸನ ರೂಪದಲ್ಲಿ (ಅನುಬಂಧ ೪) ಕಾಣಬಹುದು.

## ಅನುಬಂಧ ೧

### ಸಾಲೋಟಗಿಯ 'ಶಾಲೆ' -೯೪೫

ವಿಜಾಪುರ ಜಿಲ್ಲೆಯ ಪಾವಿಟ್ಟಿಗೆ ಅಥವಾ ಸಾಲೋಟಗಿಯಲ್ಲಿ ವೈದಿಕ ವಿದ್ಯಾಭ್ಯಾಸದ ಪ್ರಮುಖ ಶಾಲೆ ಹತ್ತನೆಯ ಶತಮಾನದಲ್ಲಿ ಊರ್ಜಿತಾವಸ್ಥೆಯಲ್ಲಿತ್ತು. ರಾಷ್ಟ್ರಕೂಟ ದೊರೆ ಮೂರನೆಯ ಕೃಷ್ಣನ ಮಂತ್ರಿಯಾಗಿದ್ದ ನಾರಾಯಣನು ಕಟ್ಟಿಸಿದ ತ್ರೈಪುರುಷದೇವರ ದೇವಾಲಯಕ್ಕೆ ಹೊಂದಿ ಈ ಶಾಲೆಯಿತ್ತು. ಶಾಲೆಯೆಂದರೆ ಪ್ರಾಚೀನ ಕರ್ನಾಟಕದಲ್ಲಿ ಉಚ್ಚ ವಿದ್ಯಾಭ್ಯಾಸದ ಕೇಂದ್ರವಾಗಿತ್ತೆಂದು ಸಾಮಾನ್ಯವಾಗಿ ಹೇಳಬಹುದಾಗಿದೆ. ಘಟಿಕೆಯೆಂಬ ಉಚ್ಚ ವಿದ್ಯಾಕೇಂದ್ರವನ್ನು ಒಂದೆಡೆ ಶಾಲೆಯೆಂದೇ ಕರೆಯಲಾಗಿದೆ.(ಘಟಿಕಾಸ್ಥಾನಮೆನಿಪ್ಪ ಶಾಲೆ). ರಮ್ಯವಾದ ಮತ್ತು ವಿಶಾಲವಾದ ಈ ಶಾಲೆಗೆ ಬೇರೆ ಬೇರೆ ಪ್ರಾಂತಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರೆಂದು ಹೇಳಲಾಗಿದೆ. (ಅತ್ರ ವಿದ್ಯಾರ್ಥಿನಃ ಸಂತಿ ನಾನಾ ಜನಪದೋದ್ಭವಾಃ ).[1] ಈ "ಶಾಲಾವಿದ್ಯಾರ್ಥಿ ಸಂಘ"ಕ್ಕೆ ೧೨ ನಿವರ್ತನಗಳಷ್ಟು ಉತ್ತಮ ಭೂಮಿಯನ್ನು ಕೊಡಲಾಗಿತ್ತು. ಈ ವಿದ್ಯಾರ್ಥಿಗಳಿಗಾಗಿ ೨೭ ವಾಸಗೃಹಗಳಿದ್ದು ಅದರ ದೀಪಗಳ ವೆಚ್ಚಕ್ಕೆಂದೇ ಮೀಸಲ್ಕಾಣಿಸಿದ ಭೂಮಿಯನ್ನು ದಾನಮಾಡಲಾಗಿತ್ತು. ಒಬ್ಬ ವ್ಯಾಖ್ಯಾತೃ (ಶಿಕ್ಷಕ) ವಿಗೆ ೫೦೦ ನಿವರ್ತನಗಳ ಭೂಮಿಯನ್ನು ಕೊಡಲಾಗಿತ್ತು. ಊರಿನಲ್ಲಿ ನಡೆಯುವ

---

1. Epigraphia Indica IV P-60

ಮದುವೆ, ಮುಂಜಿವೆಗಳಲ್ಲಿ ಜನರು ನಿರ್ದಿಷ್ಟಪಡಿಸಿದ ಹಣವನ್ನು ಈ ಶಾಲೆಗೆ ಕೊಡಬೇಕಾಗಿತ್ತು. ಅದರಂತೆ ಊರಲ್ಲಿ ಔತಣ ವಾದರೆ ವಿದ್ಯಾರ್ಥಿಗಳನ್ನು ಮತ್ತು ಗುರುವೃಂದವನ್ನು ಊರಜನ ಆಮಂತ್ರಿಸಬೇಕಾಗುತ್ತಿತ್ತು.

## ಅನುಬಂಧ ೨

### ಕೋಡಿಯ ಮಠ (೧೦೭೪–೧೧೯೨)

ಬಳ್ಳಿಗಾವೆಯ ಹಲವಾರು ಶಾಸನಗಳಿಂದ ಕೋಡಿಯ ಮಠವು ಹನ್ನೆರಡನೆಯ ಶತಮಾನದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ವಿದ್ಯಾಕೇಂದ್ರವೆಂದು ತಿಳಿದು ಬರುತ್ತದೆ. ದಕ್ಷಿಣ ಕೇದಾರವೆಂದು ಪ್ರಸಿದ್ಧಿ ಪಡೆದ ಬಳ್ಳಿಗಾವೆಯಲ್ಲಿದ್ದ ಈ ಕೋಡಿಯ ಮಠ ಎಲ್ಲ ಪ್ರಕಾರದ ವಿದ್ಯೆಗೆ ಆಗರವಾಗಿತ್ತು. ಇಲ್ಲಿ ನೈಷ್ಠಿಕ ಬ್ರಹ್ಮಚಾರಿಗಳಿದ್ದರು. ನಾಲ್ಕೂ ವೇದಗಳನ್ನೂ ಅವುಗಳ ಅಂಗಗಳನ್ನೂ ಅಭ್ಯಸಿಸುವ ಸ್ಥಾನವು ಇದಾಗಿತ್ತು. ವ್ಯಾಕರಣ ಶಾಸ್ತ್ರದ ಕೌಮಾರ, ಪಾಣಿನೀಯ, ಶಾಕಟಾಯನ ಶಬ್ದಾನುಶಾಸನ ಮುಂತಾದ ಶಾಖೆಗಳ ವಿಶೇಷ ಅಭ್ಯಾಸ ಇಲ್ಲಿ ನಡೆಯುತ್ತಿತ್ತು. ನ್ಯಾಯ, ವೈಶೇಷಿಕ, ಮೀಮಾಂಸಾ, ಸಾಂಖ್ಯ, ಬೌದ್ಧ ಮತ್ತು ಇತರ ಷಡ್ದರ್ಶನಗಳ ವ್ಯಾಖ್ಯಾನಗಳಿಗೆ ಇದೇ ಪ್ರಮುಖ ಸ್ಥಾನವಾಗಿತ್ತು. ಲಾಕುಳ ಸಿದ್ಧಾಂತ, ಪಾತಂಜಲ ಯೋಗಶಾಸ್ತ್ರಗಳ ವ್ಯಾಖ್ಯಾನಗಳೂ (ಟೀಕೆ, ಭಾಷ್ಯ) ಇಲ್ಲಿ ನಡೆಯುತ್ತಿದ್ದವು. ಇದಲ್ಲದೇ ಹದಿನೆಂಟು ಪುರಾಣ, ಧರ್ಮಶಾಸ್ತ್ರ, ಕಾವ್ಯ, ನಾಟಕ, ನಾಟಕಾದಿ ಸಕಲ ವಿದ್ಯೆಗಳಿಗೂ ಈ ಕೋಡಿಯ ಮಠ ತವರ್ಮನೆಯಾಗಿತ್ತೆಂದು ಬಳ್ಳಿಗಾವೆಯ ಶಾಸನವೊಂದು ಬಣ್ಣಿಸುತ್ತದೆ. [೧]

ಇಲ್ಲಿ ಇತರ ಶಾಸ್ತ್ರಗಳೊಂದಿಗೆ ಬೌದ್ಧಧರ್ಮ ಶಾಸ್ತ್ರವನ್ನು ಕಲಿಸಲಾಗುತ್ತಿತ್ತಲ್ಲದೇ ನಗ್ನ, ಕ್ಷಪಣಕ ಮೊದಲಾದ ಜೈನ

---

1 Epigraphia Carnatica VII Shikarpur 102.

ಮತಾನುಯಾಯಿಗಳಿಗೂ ಪ್ರವೇಶವಿದ್ದದ್ದು ಗಮನಾರ್ಹ
ವಾಗಿದೆ. ಜೊತೆಗೆ ಏಕದಂಡಿ, ತ್ರಿದಂಡಿ, ಹಂಸ, ಪರಮ
ಹಂಸಾದಿ "ನಾನಾ ದೇಶ ಭಿಕ್ಷುಕ ಜನ"ಗಳಿಗೆ ಇರಲು ಈ ಮಠ
ದಲ್ಲಿ ವ್ಯವಸ್ಥೆಯಿದ್ದದ್ದು ಆ ಕಾಲದಲ್ಲಿ ವಿದ್ಯಾಭ್ಯಾಸದ ಕ್ಷೇತ್ರ
ದಲ್ಲಿ ಮತಭೇದಕ್ಕೆ ಅವಕಾಶವಿರಲಿಲ್ಲವೆಂಬ ಅಂಶವನ್ನು ಎತ್ತಿ
ತೋರಿಸುತ್ತದೆ. ಇಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳ ಅಂಕಿ ಸಂಖ್ಯೆ
ಗಳ ಬಗ್ಗೆಯಾಗಲಿ, ಅವರಿಗೆ ಕಲಿಸುತ್ತಿದ್ದ ಗುರುವೃಂದದ
ಬಗ್ಗೆಯಾಗಲೀ ವಿವರಗಳು ಲಭ್ಯವಿಲ್ಲ. ಆದರೆ ಕೋಡಿಯ
ಮಠಕ್ಕೆ ಕೊಡಲ್ಪಟ್ಟ ಹಲವಾರು ಅರಸರ ಅನೇಕ ದಾನಶಾಸನ
ಗಳಿಂದ ಇದು ಎಷ್ಟೋ ವರ್ಷಗಳ ವರೆಗೆ (೧೦೭೩–೧೧೯೩)
ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿದ್ದ ಉಚ್ಚ ವಿದ್ಯಾ ಸಂಸ್ಥೆ
ಯಾಗಿತ್ತೆಂದು ಹೇಳಬಹುದು.

ಕೋಡಿಯ ಮಠಕ್ಕೆ ಉಜ್ವಲ ಗುರು ಪರಂಪರೆಯಿದ್ದದ್ದು
ಅಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಅವರೆಲ್ಲ
ಶೈವ ಸಿದ್ಧಾಂತದ ಅನುಯಾಯಿಗಳಾದ ಕಾಳಾಮುಖ ಗುರು-
ಗಳಾಗಿದ್ದರು. ಕೇದಾರ ಶಕ್ತಿ ಮತ್ತು ಶ್ರೀಕಂಠ ಗುರುಗಳ ನಂತರ
ಮಠದ ಆಧಿಪತ್ಯ ವಹಿಸಿದ ಸೋಮೇಶ್ವರ ಗುರುಗಳ ಬಗ್ಗೆ
ಬಳ್ಳಿಗಾವೆಯ ಶಾಸನವೊಂದು ಹೀಗೆ ಹೇಳುತ್ತದೆ. "ಸ್ವಸ್ತಿ
ಯಮ ನಿಯಮ ಸ್ವಾಧ್ಯಾಯ ಪ್ರಣಾಯಾಮ ಪ್ರತ್ಯಾಹಾರ,
ಧ್ಯಾನ ಧಾರಣಾ ಮೌನಾನುಷ್ಠಾನ ಜಪ ಸಮಾಧಿ ಶೀಳ ಸಂಪನ್ನ
ಸಿದ್ಧಾಂತ ತರ್ಕ ವ್ಯಾಕರಣ ಕಾವ್ಯ ನಾಟಕ, ಭರತಾದ್ಯನೇಕ
ಸಾಹಿತ್ಯ ವಿದ್ಯಾ ಪ್ರವೀಣರು"[2] ಇನ್ನೊಂದು ಶಾಸನದಿಂದ
ಈತ ಜೈನ, ಲೋಕಾಯತ, ಬೌದ್ಧ, ಸಾಂಖ್ಯ, ಯೋಗ,

---

2. EC SK 94.

ಮೀಮಾಂಸಾ, ನ್ಯಾಯ, ವೈಶೇಷಿಕ, ವ್ಯಾಕರಣ ಮತ್ತು ಲಾಕುಲ ಸಿದ್ಧಾಂತದಲ್ಲಿ ಪರಿಣತರಿದ್ದರೆಂದು ಗೊತ್ತಾಗುತ್ತದೆ.

ಈ ಗುರುಗಳಲ್ಲೆಲ್ಲ ಮಿಗಿಲಾದವನು ವಾಮಶಕ್ತಿ ಪಂಡಿತ-ದೇವ. ೪೭ ವರ್ಷಗಳ ವರೆಗೆ ಕೋಡಿಯ ಮಠದ ಅಧಿಪತಿಯಾಗಿದ್ದುಕೊಂಡು ಮಠವನ್ನು ಉಚ್ಚ ಮಟ್ಟಕ್ಕೆ ಏರಿಸಿದನು. ಇವನ ಆಳಿಕೆಯಲ್ಲಿ ಹಲವಾರು ಹಳ್ಳಿಗಳು ಮಠಕ್ಕೆ ದತ್ತಿಯ ರೂಪದಲ್ಲಿ ಬಂದವು. ಕಳಚೂರ್ಯ ಮತ್ತು ಚಾಲುಕ್ಯರ ದಂಡ ನಾಯಕರೆಲ್ಲ ವಾಮಶಕ್ತಿಯ ವ್ಯಕ್ತಿತ್ವ ಮತ್ತು ಮತ್ತು ತಪಃ ಪ್ರಭಾವಕ್ಕೆ ಒಳಗಾಗಿದ್ದರೆಂದು ಶಾಸನಗಳಿಂದ ತಿಳಿಯುತ್ತದೆ. ಈತನ ಘನ ಪಾಂಡಿತ್ಯವನ್ನು ಹೀಗೆ ಬಣ್ಣಿಸಲಾಗಿದೆ;"ವ್ಯಾಕರಣದಲ್ಲಿ ಪಾಣಿನಿ, ತತ್ವಶಾಸ್ತ್ರದಲ್ಲಿ ಭೂಷಣಾಚಾರ್ಯ, ನಾಟ್ಯಾದಿ ಭರತಶಾಸ್ತ್ರಗಳಲ್ಲಿ ಸ್ವತಃ ಭರತ, ಕಾವ್ಯದಲ್ಲಿ ಸಾಕ್ಷಾತ್ ಸುಬಂಧು, (ಶೈವ) ಸಿದ್ಧಾಂತದಲ್ಲಿ ಲಕುಲೀಶ, ಶಿವಪದ (ಶೈವಾಗಮಕ್ಕೆ ಸಂಬಂಧಪಟ್ಟ ಶಾಸ್ತ್ರವಿರಬೇಕು!) ದಲ್ಲಿ ಸ್ಕಂದನೇ ಸರಿ".

## ಅನುಬಂಧ ೩

### ತಾಳಗುಂದದ ಅಗ್ರಹಾರ (೧೧೫೮)

ಸ್ಥಾಣಕುಂದೂರ ಅಥವಾ ತಾಳಗುಂದದಲ್ಲಿಯ ಅಗ್ರಹಾರಕ್ಕೆ ಹೆಚ್ಚಿನ ದಾನವನ್ನು ಕೊಟ್ಟು ಮೇಲ್ತರಗತಿಯ ವಿದ್ಯಾದಾನಕ್ಕೆ ಅವಕಾಶ ಮಾಡಿಕೊಟ್ಟ ಶ್ರೇಯಸ್ಸು ದಂಡನಾಥ ಕೇಶಿಮಯ್ಯನಿಗೆ ಹೋಗುತ್ತದೆ. ಇಲ್ಲಿ ವೇದದ ವಿವಿಧ ಶಾಖೆಗಳಲ್ಲಿ ಅಷ್ಟೇ ಅಲ್ಲದೇ ಕನ್ನಡ ಭಾಷೆ, ಶಬ್ದಶಾಸ್ತ್ರ ಮತ್ತು ಬಾಲ ಶಿಕ್ಷಣಕ್ರಮ (ಬಾಲಶಿಕ್ಷೆ) ಗಳಿಗೂ ಪ್ರಾಶಸ್ತ್ಯವಿತ್ತು. ಇಲ್ಲಿ ೫೦ಕ್ಕೂ ಮಿಕ್ಕಿ ವಿದ್ಯಾರ್ಥಿಗಳಿದ್ದರು. ಸುಮಾರು ೮ ಜನ ಉಪಾಧ್ಯಾಯರಿದ್ದರು. "ಕನ್ನಡಕ್ಷರದ ಶಿಕ್ಷೆ" ಕೊಡುವ ಉಪಾಧ್ಯಾಯರು ವೇದಗಳ ಬೇರೆ ಬೇರೆ ಖಂಡಗಳನ್ನು ಕಲಿಸುವ ಉಪಾಧ್ಯಾಯರು ಮತ್ತು ಇವರಿಂದ ವಿದ್ಯೆ ಪಡೆಯಲು ಬಂದ ಛಾತ್ರರು ಆ ಅಗ್ರಹಾರದಲ್ಲಿ ಇದ್ದರು. ಅವರೆಲ್ಲರ ಆಹಾರಕ್ಕೆ, ಆಚ್ಛಾದನಕ್ಕೆ ಭೂಮಿ ಮತ್ತು ಹಣದ ಪ್ರತ್ಯೇಕ ವ್ಯವಸ್ಥೆ ಮಾಡಲಾಗಿತ್ತು. ಪ್ರತ್ಯೇಕ ವಿಷಯವನ್ನು ಕಲಿಸುವವರಿಗೆ ವೃತ್ತಿ ಅಥವಾ ವೇತನವನ್ನು ಭೂಮಿಯ ರೂಪದಲ್ಲಿ ಕೊಡಲಾಗುತ್ತಿತ್ತು. ಅದರ ವಿವರವನ್ನು ಹೀಗೆ ಕೊಡಬಹುದು.

| ವಿಷಯ (ಶಾಸ್ತ್ರ) | ವೃತ್ತಿ |
|---|---|
| ಋಗ್ವೇದ ಖಂಡಿಕ | ೧[illegible] ಮತ್ತರು |
| ಯಜುರ್ವೇದ ಪದ ಖಂಡಿಕ | ೧[illegible] ಮತ್ತರು |
| ಕಲ್ಪ ಖಂಡಿಕ | ,, ,, |
| ಸಾಮವೇದ ಖಂಡಿಕ | ,, ,, |

| | |
|---|---|
| ಶಬ್ದಶಾಸ್ತ್ರ | ೩ ಮತ್ತರು |
| ರೂಪಾವತಾರ ನ್ಯಾಸ | ,, ,, |
| ಪ್ರಾಭಾಕರ ವೇದಾಂತ | ,, ,, |
| ವೇದಾಂತದ ಸ್ವಯಂಪಾಕಿ ಸ್ವಾಮಿಗಳು | ,, ,, |
| ಕನ್ನಡದ ಉಪಾಧ್ಯಾಯರಿಗೆ | ೧ ಮತ್ತರು |
| ೩೦ ಬ್ರಾಹ್ಮಣರಿಗೆ ೬ ಬಿಂದಿಕಗಳ | ೫ ಗದ್ಯಾಣ |
| ೪೮ ವಿದ್ಯಾರ್ಥಿಗಳಿಗೆ + ಇಬ್ಬರು ವಾಣಿಯರಿಗೆ ? ಪೂಜಾರಿಗೆ | ಮತ್ತು ೪೦ ಮತ್ತರು |
| ಛತ್ರದ ಮೂವರು ಬಾಣಸಿತ್ತಿಯರಿಗೆ | ೬ ಗದ್ಯಾಣ |

ಇದಲ್ಲದೇ ಈ ೫೦ ವಿದ್ಯಾರ್ಥಿಗಳಿಗೆ ಬಟ್ಟೆಯ ವ್ಯವಸ್ಥೆಯೂ ಇತ್ತು. ೧

ಪ್ರಾಥಮಿಕ ಶಿಕ್ಷಣಕ್ಕೂ ಪುರಾಣ ಪಠನಕ್ಕೂ ಈ ಅಗ್ರಹಾರದಲ್ಲಿ ಪ್ರತ್ಯೇಕ ವ್ಯವಸ್ಥೆ ಇದ್ದ ಬಗ್ಗೆ ತಿಳಿದುಬರುತ್ತದೆ.

ಆದರೆ ಈ ಬಾಲಶಿಕ್ಷೆ ಪಡೆಯುತ್ತಿದ್ದ ವಿದ್ಯಾರ್ಥಿಗಳ ಬಗ್ಗೆ ಹೆಚ್ಚಿನ ವಿವರಗಳಿಲ್ಲ.

---

Epigraphia Carnatica VII Shikarpnr 185

## ಅನುಬಂಧ ೪

### ನಾಗಾವಿಯ ಘಟಿಕಾ ೧೦೫೮

ಶ್ರೀಮತ್ ಕಾಳಿದಾಸಯ್ಯ ದ [ ಣ್ಡನಾಯಕಂ ]..............

.................................................................

....ಕಟಕ ಕಮಳಾರ್ಕ್ಕವೆಸರ ತ್ರೈಪುರುಷ ದೇವರಶಾಲೆಯ
ಮಂ ನಿಜಾಭಿಧಾನಾಭಿರಂಜಿತ ಮಪ್ಪಮಧುಸೂದನಾ
[ ೪ ] ಯಮುಮಂ ರಾಮತೀರ್ತ್ಥಾಭಿರಾಮಮಪ್ಪ ರಾಮೇ-
ಶ್ವರಾ
ಲಯಮುಮಂ ರಾಮತೀರ್ಥಮುಮಂ ನಿಜಧರ್ಮ್ಮಕಾ
ರಿತಾಧಿಕಾರ ಪದವೀವಿರಾಜಿತನಪ್ಪ ಶಾಳೆಯ [ ಕ್ಷೈಂ
[ ಕ ]ರ್ಯ್ಯನಮಂ ಮಾಡಿಸಿ ಘಟಿಕಾಸ್ಥಾನಮೆನಿಪ ಶಾಲೆಗೆ

.................................................................

.................................................................

........ಶಾಲೆಯಲೋದುವ ವೇದಾ
ಧ್ಯಾಯಿಗಳಿನ್ನೂರ್ವರ್ಗ್ಗಂ ಶಾಸ್ತ್ರಾಧ್ಯಯಿಗಳಯ್ವ
ದಿಂಬರ್ಗ್ಗಂ ತದುಪಾಧ್ಯಾಯಿಗಳು ೩ ಭಟ್ಟದರ್ಶನ ನ್ಯಾ [ ಸ ]
ಪ್ರಭಾಕರ ವ್ಯಾಖ್ಯಾತೃಗಳ್ಮೂವರ್ಗ್ಗಂ ವೇದಮನೋ
ದಿಸುವುಪಾಧ್ಯಾಯಮೂವರ್ಗ್ಗಂ ಶಾಲೆಯ ಸರಸ್ವ
ತೀಭಣ್ಡಾರಿಗರಾರ್ವ್ವಗಮಸ್ತು ೨೫೭ ಮಾನಸ
ರ ಅಶನಾಚ್ಛಾದನಕ್ಕಂ
ಜೀರ್ಣ್ಣೋದ್ಧಾರ ಖಣ್ಡಸ್ಫು
ಟಿತ್ ನವಸುಧಾರಮ್ಮಕ್ಕಂ ಗಂಧಾಕ್ಷತ ಪುಷ್ಪ

ಧೂಪದೀಪ ನಿವೇದ್ಯಕ್ಕಂ ತ್ರೈಪುರುಷದೇವರ
ಶಾಲೆಯ ಪರಿಷವಾಣಿಯರ್ಗ್ಗೆ ಸರ್ವನ
ಮಸ್ಯವಾಗಿ ಕೊಟ್ಟ ಕೆವಾಣಿಕೇಶ್ವರದಗಳಿಂ ಬಡ [ಗ]
ಮತ್ತರು ೧೦೦೦ ಆ [ಹೊ]ಲಂ ನಾಗವಾವಿಯ

..................................................................

ಭಾಟ್ಟದರ್ಶನ ವ್ಯಾಖ್ಯಾತೃಗೆ ಮತ್ತರು ೩೫ ನ್ಯಾಸ
ವ್ಯಾಖ್ಯಾತೃಗೆ ಮತ್ತರು ೪೫, ಸರಸ್ವತಿ ಭಂಡಾರಿಗೆ ಮತ್ತ ೩೦
ಘಟಿಕಾ ಪ್ರಹಾರಿಗೆ ಮತ್ತರ್ ೩೦.... ................ ..........

ಇದೇ ಪ್ರಕಾರ ಮಧುಸೂದನ ದೇವಾಲಯಕ್ಕೆ ಹೊಂದಿದ್ದ ಮಠ ಮತ್ತು ರಾಮೇಶ್ವರ ದೇವಾಲಯಕ್ಕೆ ಹೊಂದಿ ಇದ್ದ (ಹೆಸರು ಸ್ಪಷ್ಟವಾಗದ) ವಿದ್ಯಾಸಂಸ್ಥೆಯ ವಿವರಗಳೂ ಈ ಶಾಸನಗಳಲ್ಲಿ ದೊರೆಯುತ್ತವೆ.

---

Hyderabad Archaeologial Series, VIII, Insc[riptions] of Nagavi.

## ಈ ಮಾಲೆಯ
## ಇತ್ತೀಚಿನ ಪ್ರಕಟನೆಗಳು

೧. ಪ್ರಾಚೀನ ಗ್ರೀಕರ ಅಮರ ಕೊಡುಗೆಗಳು —ಡಿ. ಟಿ. ಜೋಶಿ

೨. ಭರ್ತೃಹರಿಯ ನೀತಿಶತಕ —ಡಿ. ಎನ್. ಶಾನಭಾಗ

೩. ಹರ್ಡೇಕರ ಮಂಜಪ್ಪನವರು ಹಾಗೂ ಅವರ ಕೃತಿಗಳು —ಜಿ. ಎಸ್. ಹಾಲಪ್ಪ

೪. ಪೃಥ್ವಿ ಹಾಗೂ ಜೀವಿಗಳ ರೂಪಾಂತರ —ಎಂ. ಎಸ್. ಎಸ್. ರಾವ್

೫. ಪ್ರಜಾಪ್ರಭುತ್ವದಲ್ಲಿ ಕಾಯಿದೆಯ ಸ್ಥಾನ —ಸಿ. ಕೆ. ಎನ್. ರಾಜ

೬. ಪೇಟೆ ಮತ್ತು ಜಾಹೀರಾತುಗಳು —ಟಿ. ಎಂ. ಪಂಡಿತ

೭. ಆಯುರ್ವೇದ ಶಾಸ್ತ್ರ —ಧನ್ಯಕುಮಾರ ಇಜಾರಿ

೮. ಮೈಲಾರ ದೇವರು —ಶ್ರೀನಿವಾಸ ರಿತ್ತಿ

೯. ಭಗವದ್ಗೀತೆ —ಎಲ್. ಸಿ. ಪಾಟೀಲ

೧೦. ಭೂ ಸಂರಕ್ಷಣೆ ಮತ್ತು ಒಣ ಬೇಸಾಯ —ಎಂ. ಎಂ. ಹೊಸಮನಿ

೧೧. ಜನಪದ ಕಾವ್ಯದಲ್ಲಿ ಜೀವನ ಧರ್ಮ —ಪಿ. ವ್ಹಿ. ಮಲ್ಲಾಪುರ

೧೨. ಆಧುನಿಕ ಕನ್ನಡ–ಹಿಂದೀ ಕಾವ್ಯ —ಸಿದ್ಧಲಿಂಗ ಪಟ್ಟಣಶೆಟ್ಟಿ

---

ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ